CPMG / KA / BG-GPO/13/2003-2005 ಸುವರ್ಣ ಕರ್ನಾಟಕ 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಆಗಸ್ಟ್ ೧೧, ೨೦೦೫ (ಶ್ರಾವಣ ೨೦, ಶಕ ವರ್ಷ ೧೯೨೭) | ಸಂಚಿಕೆ ೩೨ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕಂದಾಯ ಸಚಿವಾಲಯ

**ವಿಷಯ :** ಶ್ರೀ ರಮೇಶ್ ಪಡುವಳಕರ್, ಹಿಂದಿನ ತಹಶೀಲ್ದಾರ್, ಮಂಗಳೂರು ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ.

**ಓದಲಾಗಿದೆ :** 1. ದ.ಕ. ಮಂಗಳೂರು ಜಿಲ್ಲಾಧಿಕಾರಿಯವರ ಪತ್ರ ಸಂಖ್ಯೆ: ಇಎಸ್‌ಟಿ(1) ಸಿಆರ್:44: 02-03, ದಿನಾಂಕ: 09.09.2002.

2. ಕಾರಣ ಕೇಳುವ ನೋಟೀಸು ಸಂಖ್ಯೆ: ಕಂಇ 51 ಎಡಿಇ 2002, ದಿನಾಂಕ: 08.10.2004.

**ಪ್ರಸ್ತಾವನೆ:**

ಶ್ರೀ ರಮೇಶ್ ಪಡುವಳಕರ್, ಹಿಂದಿನ ತಹಶೀಲ್ದಾರ್, ಮಂಗಳೂರು (ಪ್ರಸ್ತುತ ನಿವೃತ್ತರು) ಇವರು ಮಂಗಳೂರು ತಾಲ್ಲೂಕು ತಹಶೀಲ್ದಾರರಾಗಿ ಸೇವೆ ಸಲ್ಲಿಸುತ್ತಿದ್ದ ಅವಧಿಯಲ್ಲಿ ಸರ್ಕಾರಿ ವಸೂಲಾತಿ ಪ್ರಕರಣಕ್ಕೆ ಸಂಬಂಧಿಸಿದ ಹರಾಜಿನ ಕಡತಗಳ ನಿರ್ವಹಣೆ ಹಾಗೂ ಕರ್ತವ್ಯಲೋಪದ ಬಗ್ಗೆ ಮತ್ತು ಸರ್ಕಾರಿ ವಸತಿ ಗೃಹವನ್ನು ತೆರವುಗೊಳಿಸದೇ ಇರುವುದರಿಂದ ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸುವ ಬಗ್ಗೆ ದ.ಕ. ಮಂಗಳೂರು ಜಿಲ್ಲಾಧಿಕಾರಿಯವರು ಕ್ರಮಾಂಕ (1)ರಲ್ಲಿ ಓದಲಾದ ಪತ್ರದೊಂದಿಗೆ ಪ್ರಸ್ತಾವನೆಯನ್ನು ಆರೋಪ ಪಟ್ಟಿಗಳೊಡನೆ ಸರ್ಕಾರಕ್ಕೆ ಸಲ್ಲಿಸಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11ರಡಿಯಲ್ಲಿ ಮೇಲ್ಕಂಡ ಆರೋಪಗಳ ಬಗ್ಗೆ ಅವರ ವಿರುದ್ಧದ ಆರೋಪ ಪಟ್ಟಿಗಳನ್ನು ಶ್ರೀ ರಮೇಶ್ ಪಡುವಳಕರ್, ಇವರಿಗೆ ಜಾರಿ ಮಾಡಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ದಿನಾಂಕ: 08.10.2004ರಲ್ಲಿ ಕಾರಣ ಕೇಳುವ ನೋಟೀಸಿನ ಜೊತೆಗೆ ದೋಷಾರೋಪಣ ಪಟ್ಟಿಗಳನ್ನು ನೀಡಲಾಗಿತ್ತು. ಈ ಕಾರಣ ಕೇಳುವ ನೋಟೀಸಿಗೆ ಶ್ರೀ ರಮೇಶ್ ಪಡುವಳಕರ್ ಇವರಿಂದ ಉತ್ತರ ಬಂದಿರುವುದಿಲ್ಲ.

ಆದ್ದರಿಂದ ಆಪಾದಿತ ಅಧಿಕಾರಿ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಬಗ್ಗೆ ಇಲಾಖಾ ವಿಚಾರಣೆಯನ್ನು ಜರುಗಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 51 ಎಡಿಇ 2002, ಬೆಂಗಳೂರು, ದಿನಾಂಕ: 29ನೇ ಜೂನ್, 2005**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ರಮೇಶ್ ಪಡುವಳಕರ್, ಹಿಂದಿನ ತಹಶೀಲ್ದಾರ್ (ಪ್ರಸ್ತುತ ನಿವೃತ್ತರು) ಇವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಎನ್.ಸಿ. ಲಕ್ಷ್ಮೀನರಸಿಂಹಯ್ಯ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ನಂ.643, 10ನೇ ಮುಖ್ಯ ರಸ್ತೆ, 6ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು-10 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 (5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ದ.ಕ. ಜಿಲ್ಲೆಯ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಈ ಪ್ರಕರಣದ ವಿಚಾರಣೆಯನ್ನು ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗಧಿಪಡಿಸಿದ ಸ್ಥಳದಲ್ಲಿ ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು

ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಾಗ್ರಿಗಳನ್ನು ಜಿಲ್ಲಾಧಿಕಾರಿಗಳು, ಬೆಂಗಳೂರು ಇವರು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ.5000/- (ಐದು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ: 04.03.2002ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 45 ಸೇಆವಿ 2001 ರನ್ವಯ 1000/- (ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ದ.ಕ. ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 11 ಮತ್ತು 11(ಎ)ರಲ್ಲಿನ ವಿಧಿವಿಧಾನಗಳನ್ನು ಅನುಸರಿಸಿ, ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮಹಂತೇಶಯ್ಯ**

ಪಿ.ಆರ್.1015

ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3).

## ಶಿಕ್ಷಣ ಸಚಿವಾಲಯ

**ವಿಷಯ :** ಮೊರಾರ್ಜಿ ದೇಸಾಯಿ ವಸತಿ ಶಾಲೆಗಳಿಗೆ 2005-06ನೇ ಸಾಲಿನ ನಿರ್ವಹಣೆಗೆ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ: ಇಡಿ-110-ಯೋಯೋಕಾ-2002 ದಿನಾಂಕ: 06.05.2003.

**ಪ್ರಸ್ತಾವನೆ:**

ಮೇಲೆ ಓದಲಾದ ಆದೇಶದಲ್ಲಿ ಶಿಕ್ಷಣ ಇಲಾಖೆಯಿಂದ ವಿವಿಧ ಜಿಲ್ಲೆಗಳಲ್ಲಿ ನಡೆಯುತ್ತಿರುವ 32 ವಸತಿ ಶಾಲೆಗಳು ಮತ್ತು 4 ಅನುದಾನಿತ ವಸತಿ ಶಾಲೆಗಳನ್ನು ಹಾಲಿ ಇರುವಂತೆ ಸಮಾಜ ಕಲ್ಯಾಣ ಇಲಾಖೆಯ ವ್ಯಾಪ್ತಿಗೊಳಪಡುವ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಇವರಿಗೆ ರಾಜ್ಯ ವಲಯ ಮತ್ತು ಜಿಲ್ಲಾ ವಲಯ ಆಯ-ವ್ಯಯವನ್ನು ಸಂಬಂಧಿಸಿದ ಲೆಕ್ಕ ಶೀರ್ಷಿಕೆಯೊಂದಿಗೆ ವರ್ಗಾಯಿಸಲಾಗಿದೆ.

2005-06ನೇ ಸಾಲಿನ ಆಯ-ವ್ಯಯದಲ್ಲಿ ರಾಜ್ಯವಲಯ ಲೆಕ್ಕ ಶೀರ್ಷಿಕೆ 2202-02-800-1-05-101 (ಯೋಜನೇತರ) ಅಡಿಯಲ್ಲಿ ರೂ554.17 ಲಕ್ಷ ಅನುದಾನವನ್ನು ಒದಗಿಸಲಾಗಿದ್ದು, ಸದರಿ ಅನುದಾನದಲ್ಲಿ 1/3 ಭಾಗವನ್ನು ಅನುಬಂಧದಲ್ಲಿ ಲಗತ್ತಿಸಿರುವ ಒಟ್ಟು 33 ವಸತಿ ಶಾಲೆಗಳಿಗೆ ಅನುಬಂಧದಲ್ಲಿ ಲಗತ್ತಿಸಿರುವಂತೆ ಒಟ್ಟು ರೂ.181.50 ಲಕ್ಷಗಳನ್ನು ಹಾಗೂ 2005-06ನೇ ಸಾಲಿಗೆ ಜಿಲ್ಲಾ ಪಂಚಾಯ್ತಿಗಳಿಗೆ ಸಂಬಂಧಿಸಿದ ಯೋಜನೆ ಮತ್ತು ಯೋಜನೇತರ ಅನುದಾನದ ವಿವರದ ಲಿಂಕ್ ಡಾಕ್ಯುಮೆಂಟ್‌ನಲ್ಲಿ ನಮೂದಿಸಿರುವ ಲೆಕ್ಕ ಶೀರ್ಷಿಕೆ 2202-02-110-3-56 (ಯೋಜನೇತರ) ಅಡಿಯಲ್ಲಿ ಗಾಂಧಿ ಗ್ರಾಮೀಣ ಗುರುಕುಲ, ಹೊಸರಿತ್ತಿ (ಹಾವೇರಿ ಜಿಲ್ಲೆ) ಗೆ ಅನುದಾನ ಒದಗಿಸಲಾಗಿದ್ದು, 1/ 3 ಭಾಗವನ್ನು ವಸತಿ ಶಾಲೆಗೆ ಬಳಸಲು ಅನುಮತಿಯನ್ನು ನೀಡಲು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಕಂಡಂತ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 193 ಯೋಯೋಕಾ 2005, ದಿನಾಂಕ: 6ನೇ ಜುಲೈ, 2005**

**(ಇಡಿ 31 ಸ್ಕೀಮರ (ಯೂನಿಕ್) 2005, ದಿನಾಂಕ: 06.07.2005)**

2005-06ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 2202-02-800-1-05-101 (ಯೋಜನೇತರ) ಅಡಿಯಲ್ಲಿ ನಿಗಧಿಯಾಗಿರುವ ರೂ.554.17 ಲಕ್ಷಗಳಲ್ಲಿ ರೂ.181.50 ಲಕ್ಷಗಳನ್ನು (ರೂ ನೂರ ಎಂಭತ್ತೊಂದು ಲಕ್ಷದ ಐವತ್ತು ಸಾವಿರ ಮಾತ್ರ) 33 ವಸತಿ ಶಾಲೆಗಳಿಗೆ (ಅನುಬಂಧ ಲಗತ್ತಿಸಿದೆ) ಜಿಲ್ಲಾ ಪಂಚಾಯತ್‌ಗಳ ಮೂಲಕ ಬಿಡುಗಡೆ ಮಾಡಲು ಆದೇಶಿಸಲಾಗಿದೆ.

ಯೋಜನೇತರ ಅನುದಾನದ ವಿವರದ ಲಿಂಕ್ ಡಾಕ್ಯುಮೆಂಟ್‌ನಲ್ಲಿ ನಮೂದಿಸಿರುವ ಲೆಕ್ಕ ಶೀರ್ಷಿಕೆ 2202-02-110-3-56 (ಯೋಜನೇತರ) ಅಡಿಯಲ್ಲಿ ಗಾಂಧಿ ಗ್ರಾಮೀಣ ಗುರುಕುಲ, ಹೊಸರಿತ್ತಿ, (ಹಾವೇರಿ ಜಿಲ್ಲೆ) ಗೆ ಅನುದಾನವನ್ನು ಒದಗಿಸಲಾಗಿದ್ದು, ರೂ.12.14 ಲಕ್ಷಗಳು (ರೂ. ಹನ್ನೆರಡು ಲಕ್ಷದ ಹದಿನಾಲ್ಕು ಸಾವಿರ ಮಾತ್ರ) ಗಾಂಧಿ ಗ್ರಾಮೀಣ ಗುರುಕುಲ, ಹೊಸರಿತ್ತಿ, ಇವರಿಗೆ ಜಿಲ್ಲಾ ಪಂಚಾಯತ್ ಮೂಲಕ ಬಿಡುಗಡೆ ಮಾಡಲು ಸಹ ಅನುಮತಿಯನ್ನು ನೀಡಲಾಗಿದೆ.

ಸದರಿ ಮೊತ್ತವನ್ನು ಸಂಬಂಧಪಟ್ಟ ಲೆಕ್ಕ ಶೀರ್ಷಿಕೆಗಳಡಿ ಭರಿಸತಕ್ಕದ್ದು. ಈ ಹಣವನ್ನು ಡ್ರಾ ಮಾಡಲು ಸಂಬಂಧಪಟ್ಟ ಜಿಲ್ಲಾ ಪಂಚಾಯತ್ ಮುಖ್ಯ ಲೆಕ್ಕಾಧಿಕಾರಿಗಳಿಗೆ ಅನುಮತಿ ನೀಡಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅಧಿಕೃತ ಟಿಪ್ಪಣಿ ಸಂಖ್ಯೆ: ಇಡಿ-400-ಐಎಫ್ (ಬಿಎ) 2005 ದಿನಾಂಕ: 21.06.2005ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ್**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಸಹ ಕಾರ್ಯದರ್ಶಿ(ಯೋಜನೆ),
ಶಿಕ್ಷಣ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 193 ಯೋಯೋಕಾ 2005 ದಿನಾಂಕ: 6.07.2005ಕ್ಕೆ ಅನುಬಂಧ**

**ಎ-ಮೊರಾರ್ಜಿ ದೇಸಾಯಿ ವಸತಿ ಶಾಲೆಗಳು**

| ಕ್ರ.ಸಂ. | ಜಿಲ್ಲೆಯ ಹೆಸರು | ಶಾಲೆ ನಡೆಯುತ್ತಿರುವ ಸ್ಥಳ | ಈಗ ಬಿಡುಗಡೆ ಮಾಡಿರುವ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|---|
| 1. | ಬೆಂಗಳೂರು ನಗರಜಿಲ್ಲೆ | ಚಾಮರಾಜಪೇಟೆ | 5.50 |
| 2. | ಬೆಂಗಳೂರು ಗ್ರಾಮಾಂತರ | ಐಜೂರು ರಾಮನಗರ | 5.50 |
| 3. | ಕೋಲಾರ | ಮದನಹಳ್ಳಿ ಕ್ರಾಸ್ | 5.50 |

| ಕ್ರ.ಸಂ. | ಜಿಲ್ಲೆಯ ಹೆಸರು | ಶಾಲೆ ನಡೆಯುತ್ತಿರುವ ಸ್ಥಳ | ಈಗ ಬಿಡುಗಡೆ ಮಾಡಿರುವ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|---|
| 4. | ತುಮಕೂರು | ಸಿದ್ದರಬೆಟ್ಟ | 5.50 |
| 5. | ಶಿವಮೊಗ್ಗ | ಗಾಜನೂರು | 5.50 |
| 6. | ಚಿತ್ರದುರ್ಗ | ಕಾತ್ರಾಳ | 5.50 |
| 7. | ಮೈಸೂರು | ನಂಜನಗೂಡು | 5.50 |
| 8. | ಮಂಡ್ಯ | ಕೆರೆಕೊಣ್ಣೂರು | 5.50 |
| 9. | ಹಾಸನ | ಮಗಚಿ ವಿದ್ಯಾಪೀಠ ಕಂದಲಿ | 5.50 |
| 10. | ಚಿಕ್ಕಮಗಳೂರು | ಬೀಕನಹಳ್ಳಿ | 5.50 |
| 11. | ಕೊಡಗು | ಬಸವನಹಳ್ಳಿ | 5.50 |
| 12. | ದಕ್ಷಿಣ ಕನ್ನಡ | ಮುಲ್ಕಿ | 5.50 |
| 13. | ಬೆಳಗಾಂವ | ಸಂಕೇಶ್ವರ | 5.50 |
| 14. | ಬಿಜಾಪುರ | ಬಂಡವಾಳ | 5.50 |
| 15. | ಹಾವೇರಿ | ನೆಗಳೂರು | 5.50 |
| 16. | ಉತ್ತರ ಕನ್ನಡ | ಶಿರ್ಸಿ | 5.50 |
| 17. | ಗುಲ್ಬರ್ಗಾ | ತೆಂಬಾವಿ | 5.50 |
| 18. | ಬಳ್ಳಾರಿ | ಹೊಸಪೇಟೆ | 5.50 |
| 19. | ಕೊಪ್ಪಳ | ಕುಷ್ಟಗಿ | 5.50 |
| 20. | ಬೀದರ್ | ಬಸವಕಲ್ಯಾಣ | 5.50 |
| | | **ಬಿ-ಪರಿಶಿಷ್ಟ ವರ್ಗ ಮತ್ತು ಪರಿಶಿಷ್ಟ ಜಾತಿ ವಸತಿ ಶಾಲೆಗಳು** | |
| 1. | ದಾವಣಗೆರೆ ಜಿಲ್ಲೆ | ಮಾಯಕೊಂಡ | 5.50 |
| 2. | ಮೈಸೂರು ಜಿಲ್ಲೆ | ನಚಿಜನಗೂಡು | 5.50 |
| 3. | ಗುಲ್ಬರ್ಗಾ ಜಿಲ್ಲೆ | ಜಗತ | 5.50 |
| 4. | ಬಾಗಲಕೋಟೆ ಜಿಲ್ಲೆ | ಬಾಗಲಕೋಟೆ | 5.50 |
| | | **ಸಿ-ಗಾಂಧಿ ತತ್ವ ಆಧಾರಿತ ವಸತಿ ಶಾಲೆ** | |
| 1. | ಬಳ್ಳಾರಿ ಜಿಲ್ಲೆ | ಚಳ್ಳಗುರ್ಕಿ | 5.50 |
| | | **ಡಿ-ಮುಸ್ಲಿಂ ವಸತಿ ಶಾಲೆಗಳು:** | |
| 1. | ಮಂಡ್ಯ ಜಿಲ್ಲೆ | ಶ್ರೀರಂಗಪಟ್ಟಣ | 5.50 |
| 2. | ಬೆಂಗಳೂರು ಗ್ರಾಮಾಂತರ | ರಾಮನಗರ | 5.50 |
| 3. | ದಕ್ಷಿಣ ಕನ್ನಡ ಜಿಲ್ಲೆ | ಕೋಟೆ ಕಾರ್ | 5.50 |
| 4. | ಬಿಜಾಪುರ ಜಿಲ್ಲೆ | ಬಿಜಾಪುರ | 5.50 |
| 5. | ಗುಲ್ಬರ್ಗಾ ಜಿಲ್ಲೆ | ಗುಲ್ಬರ್ಗಾ | 5.50 |
| | | **ಇ-ಅನುದಾನಿತ ವಸತಿ ಶಾಲೆಗಳು** | |
| 1. | ಧಾರವಾಡ ಜಿಲ್ಲೆ | ಬುದ್ದರಖಿತ ವಸತಿ ಶಾಲೆ ಧಾರವಾಡ | 5.50 |
| 2. | ಬೆಳಗಾವಿ ಜಿಲ್ಲೆ | ಕಿತ್ತೂರು ರಾಣಿ ಚೆನ್ನಮ್ಮ ಬಾಲಕಿಯರ ವಸತಿ ಶಾಲೆ ಕಿತ್ತೂರು | 5.50 |
| 3. | ಶಿವಮೊಗ್ಗ ಜಿಲ್ಲೆ | ಡಾ: ಅಂಬೇಡ್ಕರ್ ಹೆಣ್ಣುಮಕ್ಕಳ ವಸತಿ ಶಾಲೆ ಶಿವಮೊಗ್ಗ | 5.50 |
| | | **ಒಟ್ಟು ಮೊತ್ತ ರೂ.** | **181.50 ಲಕ್ಷಗಳು** |

ಪಿ.ಆರ್.1017

**ಕೆ. ಶ್ರೀಕಂಠೇಶ್ವರ್**
ವಿಶೇಷಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಸಹ ಕಾರ್ಯದರ್ಶಿ(ಯೋಜನೆ), ಶಿಕ್ಷಣ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಪುರಸಭಾ ನೌಕರರನ್ನು ಕರ್ನಾಟಕ ಮುನಿಸಿಪಾಲಿಟಿ ಅಧಿನಿಯಮ 1964ರ ಕಲಂ 365(2)(ಎ) ಪ್ರಕಾರ ಕರ್ನಾಟಕ ಪೌರಾಡಳಿತ ಸೇವಾ ಅಧಿಕಾರಿಗಳೆಂದು (ಕೆಎಂಎಎಸ್) ಆದೇಶಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ನಅಇ 258 ಇಎಂಸಿ 94, ದಿನಾಂಕ: 09.12.1998.
2. ಪೌರಾಡಳಿತ ನಿರ್ದೇಶನಾಲಯದ ಪತ್ರ ಸಂಖ್ಯೆ: ಪೌನಿ: ಕೆಎಂಎಎಸ್/ ಸಿಆರ್.9/ 2004-05, ದಿನಾಂಕ: 16.06.2005.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶ ಸಂಖ್ಯೆ: ನಅಇ 258 ಇಎಂಸಿ 94, ದಿನಾಂಕ: 09.12.1998ರ ಕಾರ್ಯಕಾರಿ ಆದೇಶದ ಪ್ರಕಾರ ಈ ಕೆಳಕಂಡ ವೃಂದಗಳಲ್ಲಿ 5 ವರ್ಷ ಸೇವೆ ಸಲ್ಲಿಸಿದ ನೌಕರರನ್ನು ಶೇಕಡಾವಾರು ಸಂಖ್ಯೆಯಲ್ಲಿ ಕರ್ನಾಟಕ ಪೌರಾಡಳಿತ ಸೇವಾ ವೃಂದದ ಮುಖ್ಯಾಧಿಕಾರಿ ಶ್ರೇಣಿ-2ರ ಹುದ್ದೆಗೆ ಸೇರ್ಪಡೆ ಮಾಡಲು ಈ ಕೆಳಕಂಡಂತೆ ಅವಕಾಶವನ್ನು ಕಲ್ಪಿಸಲಾಗಿದೆ:

1. ನೇರ ನೇಮಕಾತಿ ಮೂಲಕ ಶೇಕಡಾ 33.33 — 33 ಹುದ್ದೆಗಳು
2. ಪೌರ ಸೇವಾ ವೃಂದದ ನೌಕರರಿಂದ ಆಯ್ಕೆ:
   ಅ. ಕಛೇರಿ ವ್ಯವಸ್ಥಾಪಕರು ಶೇಕಡಾ 24.76 — 25 ಹುದ್ದೆಗಳು
   ಆ. ಕಂದಾಯ ಅಧಿಕಾರಿಗಳು ಶೇಕಡಾ 19.05 — 19 ಹುದ್ದೆಗಳು
   ಇ. ಹಿರಿಯ ಆರೋಗ್ಯ ನಿರೀಕ್ಷಕರು ಶೇಕಡಾ 22.85 — 23 ಹುದ್ದೆಗಳು

**ಒಟ್ಟು 100 ಹುದ್ದೆಗಳು**

ಮೇಲೆ ಓದಲಾದ (2)ರ ಪತ್ರದಲ್ಲಿ ಪೌರಾಡಳಿತ ನಿರ್ದೇಶಕರು ಬೆಂಗಳೂರು ಇವರು ಹಾಲಿ 2ನೇ ಶ್ರೇಣಿ ಮುಖ್ಯಾಧಿಕಾರಿ ವೃಂದ ಬಲದಲ್ಲಿ ಮಂಜೂರಾದ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿಗಳ ಸಂಖ್ಯೆ ಹಾಗೂ ಕೊರತೆ ಇರುವ ಅಧಿಕಾರಿಗಳ ಸಂಖ್ಯೆ ಈ ಕೆಳಕಂಡಂತೆ ಇರುತ್ತದೆಂದು ತಿಳಿಸಿರುತ್ತಾರೆ.

| ಕ್ರ.ಸಂ. | ನಿಯಮಾನುಸಾರ ಅನುಪಾತ | ಒಟ್ಟು ಹುದ್ದೆಗಳ ಸಂಖ್ಯೆ | 2ನೇ ಶ್ರೇಣಿ ಮುಖ್ಯಾಧಿಕಾರಿ ವೃಂದದಲ್ಲಿ ಕರ್ತವ್ಯ ಮಾಡುತ್ತಿರುವವರ ಸಂಖ್ಯೆ | ಭರ್ತಿ ಮಾಡಬೇಕಾದ ಹುದ್ದೆಗಳ ಸಂಖ್ಯೆ |
|---|---|---|---|---|
| 1. | ನೇರ ನೇಮಕಾತಿ 33 1/3% | 31 ಹುದ್ದೆಗಳು | | 31 |
| 2. | ಕಛೇರಿ ವ್ಯವಸ್ಥಾಪಕರು 24.76% | 23 ಹುದ್ದೆಗಳು | 20 | 3 |
| 3. | ಕಂದಾಯಾಧಿಕಾರಿಗಳು 19.05% | 18 ಹುದ್ದೆಗಳು | 18 | 0 |
| 4. | ಹಿರಿಯ ಆರೋಗ್ಯ ನಿರೀಕ್ಷಕರು 22.85% | 21 ಹುದ್ದೆಗಳು | 19 | 2 |
| | **ಒಟ್ಟು** | **93 ಹುದ್ದೆಗಳು** | | |

ಅದರಂತೆ ನೇರ ನೇಮಕಾತಿ ಹುದ್ದೆಗಳನ್ನು ಭರ್ತಿ ಮಾಡಲು ಈಗಾಗಲೇ ಕರ್ನಾಟಕ ಲೋಕಸೇವಾ ಆಯೋಗಕ್ಕೆ ಪ್ರಸ್ತಾವನೆ ಸಲ್ಲಿಸಿ, ಉಳಿದಂತೆ ಸಂಬಂಧಿಸಿದ ಕೇಡರ್ ನಲ್ಲಿ ಖಾಲಿ ಇರುವ ಹುದ್ದೆಗಳಿಗೆ ಅರ್ಹ ಪುರಸಭೆ ನೌಕರರುಗಳನ್ನು ಆಯ್ಕೆ ಮಾಡಬೇಕೆಂದು ತಿಳಿಸಿ ಕಛೇರಿ ವ್ಯವಸ್ಥಾಪಕ ವೃಂದದಿಂದ 3 ಹುದ್ದೆಗಳನ್ನು ಹಾಗೂ ಹಿರಿಯ ಆರೋಗ್ಯ ನಿರೀಕ್ಷಕರ ವೃಂದದಿಂದ 2 ಹುದ್ದೆಗಳನ್ನು ಒಟ್ಟು 5 ಜನ ನೌಕರರನ್ನು ಕೆಎಂಎಸ್ ವೃಂದಕ್ಕೆ ವಿಲೀನಗೊಳಿಸಿ ಸೇರ್ಪಡೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ವಿವರಿಸಿರುವ ಅಂಶಗಳನ್ನು ಗಮನಿಸಿ ಸರ್ಕಾರವು ಪೌರಾಡಳಿತ ನಿರ್ದೇಶನಾಲಯ ರವರು ಶಿಫಾರಸ್ಸು ಮಾಡಿರುವ ನಿಯಮಾನುಸಾರ ಅರ್ಹತೆ ಹೊಂದಿರುವ 5 ಪುರಸಭಾ ನೌಕರರನ್ನು ಕರ್ನಾಟಕ ಮುನಿಸಿಪಾಲಿಟೀಸ್ ಅಧಿನಿಯಮ 1964ರ ಕಲಂ 365(2) (ಎ) ಪ್ರಕಾರ ವೇತನ ಶ್ರೇಣಿ 4575-8400ರಲ್ಲಿ ಕರ್ನಾಟಕ ಪೌರಾಡಳಿತ ಸೇವಾ ಅಧಿಕಾರಿಗಳ (ಮುಖ್ಯಾಧಿಕಾರಿ ಶ್ರೇಣಿ-2) ಹುದ್ದೆಗೆ ವಿಲೀನಗೊಳಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ನಅಇ 62 ಇಎಂಸಿ 2003, ಬೆಂಗಳೂರು, ದಿನಾಂಕ: 8ನೇ ಜುಲೈ, 2005**

ಸರ್ಕಾರವು ಪ್ರಸ್ತಾವನೆಯಲ್ಲಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಕರ್ನಾಟಕ ಮುನಿಸಿಪಾಲಿಟೀಸ್ ಅಧಿನಿಯಮ 1964ರ ಕಲಂ 365(2)(ಎ) ಪ್ರಕಾರ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ತಿಳಿಸಿರುವ ವಿವಿಧ ವೃಂದಗಳಲ್ಲಿ ಕೆಲಸ ಮಾಡುತ್ತಿರುವ 5 ಪುರಸಭಾ ನೌಕರರುಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ಪೌರ ಸೇವಾ ವೃಂದದ ಅಧಿಕಾರಿಗಳೆಂದು ವೇತನ ಶ್ರೇಣಿ 4575-8400ರ (ಮುಖ್ಯಾಧಿಕಾರಿ ಶ್ರೇಣಿ-2) ಹುದ್ದೆಯಲ್ಲಿ ಸ್ಥಾನ ಮಾನವನ್ನು ನೀಡಿ, ವೇತನವನ್ನೊಳಗೊಂಡಂತೆ ಎಲ್ಲಾ ಸೇವಾ ಸೌಲಭ್ಯಗಳನ್ನು ಕೆಎಂಎಎಸ್ ಅಧಿಕಾರಿಗಳಿಗೆ ಅನ್ವಯವಾಗುವ ಸೇವಾ ನಿಯಮಾವಳಿಗೊಳಪಟ್ಟು ಹಾಗೂ ಈ ಕೆಳಕಂಡ ನಿಬಂಧನೆಗೊಳಪಡಿಸಿ ವಿಲೀನಗೊಳಿಸಿ ಆದೇಶಿಸಲಾಗಿದೆ.

1. ಈ ಎಲ್ಲಾ ನೌಕರರುಗಳು ಸರ್ಕಾರದ ಆದೇಶ ಸಂಖ್ಯೆ: ನಅಇ 258 ಇಎಂಸಿ 94, ದಿನಾಂಕ: 09.12.1998ರಲ್ಲಿ ತಿಳಿಸಿರುವಂತೆ ಮುಖ್ಯಾಧಿಕಾರಿ ಶ್ರೇಣಿ-2 ಹುದ್ದೆಗೆ ನಿಗದಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳನ್ನು ಮುಖ್ಯಾಧಿಕಾರಿ ಶ್ರೇಣಿ-2 ಹುದ್ದೆಯಲ್ಲಿ ಕರ್ತವ್ಯ ವಹಿಸಿಕೊಂಡ ದಿನಾಂಕದಿಂದ ಎರಡು ವರ್ಷದೊಳಗಾಗಿ ಪಾಸು ಮಾಡತಕ್ಕದ್ದು.
2. ಪ್ರಸ್ತುತ ಹೊರಡಿಸಿರುವ ವಿವಿಧ ವೃಂದಗಳ ಅಂತಿಮ ಜೇಷ್ಠತಾ ಪಟ್ಟಿಯಲ್ಲಿ ಯಾವುದೇ ಮಾರ್ಪಾಡುಗಳನ್ನು ಮಾಡಲು ನ್ಯಾಯಾಲಯಗಳು ಆದೇಶಿಸಿದಲ್ಲಿ, ಆ ಪ್ರಕಾರ ಪೌರಾಡಳಿತ ನಿರ್ದೇಶಕರು 2 ತಿಂಗಳೊಳಗಾಗಿ ಈ ಬಗ್ಗೆ ಪರಿಷ್ಕೃತ ಅಂತಿಮ ಜೇಷ್ಠತಾ ಪಟ್ಟಿಯನ್ನು ಹೊರಡಿಸಿ, ಸರ್ಕಾರಕ್ಕೆ ತಿಳಿಸತಕ್ಕದ್ದು.

ಈ ನೌಕರರುಗಳಿಗೆ ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ-2 ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸುವವರೆಗೆ ಮತ್ತು ಮುಂದಿನ ಆದೇಶದವರೆಗೆ ಅವರುಗಳನ್ನು ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಸ್ಥಳದಲ್ಲಿಯೇ ಮುಂದುವರೆಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜೆ. ರಾಘವೇಂದ್ರಾಚಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**ಅನುಬಂಧ**

**ಸರ್ಕಾರಿ ಆದೇಶ ಸಂಖ್ಯೆ: ನಅಇ 62 ಇಎಂಸಿ 2003, ಬೆಂಗಳೂರು, ದಿನಾಂಕ: 8ನೇ ಜುಲೈ, 2005**

ಕರ್ನಾಟಕ ಮುನಿಸಿಪಾಲಿಟೀಸ್ ಅಧಿನಿಯಮ 1964ರ ಕಲಂ 365(2)(ಎ) ಪ್ರಕಾರ ಕೆಎಂಎಎಸ್ ಸೇವೆಗೆ ವಿಲೀನಗೊಳಿಸಿ ಸರ್ಕಾರಿ ಅಧಿಕಾರಿಗಳೆಂದು ಆದೇಶಿಸಿರುವ ಪುರಸಭಾ ನೌಕರರ ಪಟ್ಟಿ.

| ಕ್ರ.ಸಂ. | ನೌಕರರ ವೃಂದ ಮತ್ತು ಹೆಸರು | ಜೇಷ್ಠತೆಯ ಸಂಖ್ಯೆ |
|---|---|---|
| | **ವ್ಯವಸ್ಥಾಪಕರು** | |
| 1. | ಶ್ರೀ ಅಬ್ದುಲ್ ಬಷೀರ್ | 87 |
| 2. | ಶ್ರೀಮತಿ ಇಂದಿರಾಬಾಯಿ | 89 |
| 3. | ಶ್ರೀ ಎ.ಡಿ. ಮಂಜಪ್ಪ | 90 |
| | **ಹಿರಿಯ ಆರೋಗ್ಯ ನಿರೀಕ್ಷಕರು** | |
| 1. | ಶ್ರೀ ಆರ್.ಬಿ. ಮಲ್ಲಾಪುರ | 131 |
| 2. | ಶ್ರೀ ಎಸ್.ಎನ್. ಪ್ರೇಮ ಕುಮಾರ್ | 132 |

**ಜೆ. ರಾಘವೇಂದ್ರಾಚಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಪಿ.ಆರ್.1023

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** ಶ್ರೀ ಬಿ. ಗಿರೀಶ್, ಹಿಂದಿನ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಜಿಲ್ಲಾ ಅಧಿಕಾರಿ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ, ಇವರಿಗೆ ಸಂಬಂಧಿಸಿದಂತೆ ಅಕ್ರಮ ಸಂಭಾವನೆ ಸ್ವೀಕರಿಸಿದ ಹಿನ್ನೆಲೆಯಲ್ಲಿ ಅಭಿಯೋಜನಾ ಮಂಜೂರಾತಿ ಆದೇಶ ಕುರಿತು.

**ಓದಲಾಗಿದೆ :**
1. ಕ್ರ.ಸಂ.1 (ಸ್ವೀಕೃತಿ) ಲೋಕ/ ಐಎನ್‌ವಿ (ಜಿ)/ ಎಂ 20/ ಸಿಆರ್/ 6/ 2000 ಎಂ.ವೈ.ಎಸ್. ದಿನಾಂಕ: 06.09.2000.
2. ಕ್ರ.ಸಂ.1 (ಸ್ವೀಕೃತಿ) ಲೋಕ/ ಐಎನ್‌ವಿ (ಜಿ)/ ಎಂ 20/ ಸಿಆರ್ 6/ 2000 ಎಂ.ವೈ.ಎಸ್. ದಿನಾಂಕ: 30.04.2001ರ ಪತ್ರವು ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಪೊಲೀಸ್ ವಿಂಗ್, ಬೆಂಗಳೂರು ಇವರಿಂದ ಬಂದಿದೆ.
3. ಸರ್ಕಾರಿ ಪತ್ರ ಸಂಖ್ಯೆ: ಸಕಇ 343 ಬಿಇಟಿ 2000, ದಿನಾಂಕ: 22.09.2001.
4. ಕ್ರ.ಸಂ.1 (ಸ್ವೀಕೃತಿ) ಲೋಕ/ ಐಎನ್‌ವಿ (ಜಿ)/ ಎಂ 20/ ಸಿಆರ್/ 6/ 2000 ಎಂ.ವೈ.ಎಸ್. ದಿನಾಂಕ: 10.07.2002ರ ಪತ್ರವು ಉಪ ಆರಕ್ಷಕ ಮಹಾನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರಿಂದ ಬಂದಿದೆ.
5. ಲೋಕ/ ತನಿಖೆ/ (ಜಿ)/ ಎಂ/ 20-ಸಿಆರ್-6/ 2000/ ಎಂಐಎಸ್ ದಿನಾಂಕ: 24.07.2003, ದಿನಾಂಕ: 13.10.2003 ಮತ್ತು 08.06.2004, ದಿನಾಂಕ: 16.06.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1) ದಿನಾಂಕ: 06.09.2000ರ ಪತ್ರದಲ್ಲಿ ಹೆಚ್ಚುವರಿ ಪೊಲೀಸ್ ಮಹಾ ನಿರೀಕ್ಷಕರು ಶ್ರೀಯುತ ಬಿ. ಗಿರೀಶ್, ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿ ಇವರು ಚಾಮರಾಜನಗರ ತಾಲ್ಲೂಕು, ಹೊನ್ನಹಳ್ಳಿ ಪೋಸ್ಟ್ ಯಲಚಗೆರೆ ತೋಟ ಇಲ್ಲಿ ವಾಸವಾಗಿರುವ ಶ್ರೀ ಕೃಷ್ಣಪ್ಪ ತಂದೆ ಅರುಣಾಚಲ ಗೌಂಡರ್ ರವರಿಗೆ ವಿದ್ಯಾಭ್ಯಾಸದ ಸಲುವಾಗಿ ಅಧಿಕಾರದ ಒಲವು ತೋರಿಸಲು ದಿನಾಂಕ: 24.07.2000ರಂದು ತಗಾದೆ ಮಾಡಿ, ಅಕ್ರಮ ಸಂಭಾವನೆ ರೂ.4000 ವನ್ನು ಪಡೆಯುತ್ತಿದ್ದಾಗ ಲೋಕಾಯುಕ್ತ ಕಛೇರಿಯು ಬೀಸಿರುವ ಬಲೆಗೆ ಸಿಕ್ಕುಬಿದ್ದಿರುವ ಅಂಶವನ್ನು ವ್ಯಕ್ತಪಡಿಸಿರುವರು. ಇದಲ್ಲದೆ ಆಪಾದಿತ ಅಧಿಕಾರಿಯ ಫಿನಾಪ್ತಲಿನ್ ಪರೀಕ್ಷೆಗೆ ಒಳಪಡಿಸಿದ್ದು, ಸ್ಥಿರೀಕರಿಸಿಕೊಂಡಿರುವ ಅಂಶವನ್ನೂ ಸಹ ಗಮನಕ್ಕೆ ತಂದಿರುವರು. ಮತ್ತು ಇವರ ಮೇಲೆ ಲಂಚ ನಿರೋಧ ಕಾಯಿದೆ 1988ರ ಸೆಕ್ಷನ್ 7, 13 (1) ಡಿ ರ ಜೊತೆ ಓದಲಾದ 13 (2) ರನ್ವಯ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ: 6/ 2000, ಮೈಸೂರು ಲೋಕಾಯುಕ್ತ ಕಛೇರಿಯಲ್ಲಿ ಮೈಸೂರು ಪೊಲೀಸ್ ಸ್ಟೇಷನ್‌ನಲ್ಲಿ ಕ್ರಿಮಿನಲ್ ಪ್ರಕರಣ ದಾಖಲಿಸಿದ್ದು, ಸದರಿಯವರನ್ನು ಅಮಾನತ್ತಿನಲ್ಲಿರಿಸಲೂ ಸಹ ಶಿಫಾರಸ್ಸು ಮಾಡಿರುವರು. ಇದರನ್ವಯ ಶ್ರೀಯುತ ಬಿ. ಗಿರೀಶ್ ರವರನ್ನು ಸರ್ಕಾರಿ ಆದೇಶ ಸಂಖ್ಯೆ: ಸಕಇ 343 ಬಿಇಟಿ 2000, ದಿನಾಂಕ: 30.09.2000ರ ಆದೇಶದಲ್ಲಿ ಅಮಾನತ್ತಿನಲ್ಲಿರಿಸಲಾಗಿದ್ದು, ಸದರಿಯವರನ್ನು ಸೇವೆಗೆ ಪುನರ್ ಸ್ಥಾಪಿಸಲಾಗಿದೆ. ಹಾಲಿ ಶ್ರೀಯುತರು ಉಡುಪಿ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಜಿಲ್ಲಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿರುವರು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ: 30.04.2001ರ ಪತ್ರದಲ್ಲಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಕರ್ನಾಟಕ ಲೋಕಾಯುಕ್ತ ಪೊಲೀಸ್ ವಿಭಾಗ, ಬೆಂಗಳೂರು ಇವರು ಸರ್ಕಾರಕ್ಕೆ ವರದಿ ಮಾಡುತ್ತಾ, ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ ತನಿಖಾಧಿಕಾರಿಯು ಶ್ರೀಯುತ ಬಿ. ಗಿರೀಶ್ ರವರು ತಗಾದೆ ಮಾಡಿ, ಅಕ್ರಮ ಸಂಭಾವನೆ ಸ್ವೀಕರಿಸಿದ ವಿಷಯವು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ ಲಂಚ ನಿರೋಧ ಕಾಯಿದೆ 1988ರ ಕಲಂ 7, 13 (1) ಡಿರ ಜೊತೆ 13 (2)ರ ರೀತ್ಯ ಸಕ್ಷಮ ಪ್ರಾಧಿಕಾರವು ಆಪಾದಿತ ಅಧಿಕಾರಿಯ ಮೇಲೆ ಅಭಿಯೋಜನಾ ಮಂಜೂರಾತಿ ಹೂಡಲು ಸೂಕ್ತ ಆದೇಶವನ್ನು ಹೊರಡಿಸಬೇಕೆಂಬ ಅಂಶವನ್ನು ವ್ಯಕ್ತಪಡಿಸಿರುವರು.

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ದಿನಾಂಕ: 22.09.2001ರ ಪತ್ರದಲ್ಲಿ ಪ್ರಕರಣವನ್ನು ಸರ್ಕಾರವು ಪರಿಶೀಲಿಸಿ, ಸಿಂಧುತ್ವ ಪ್ರಮಾಣ ಪತ್ರ ನೀಡುವ ಕುರಿತು ಫಿರ್ಯಾಧಿದಾರನಿಗೂ ಹಾಗೂ ಅಧಿಕಾರಿಗೂ ವೈರತ್ವ ಇರುವ ಅಂಶವನ್ನು ಗಮನಿಸಿ, ಅಭಿಯೋಗಕ್ಕೆ ಒಳಪಡಿಸುವ ಅವಶ್ಯಕತೆ ಇಲ್ಲವೆಂದೂ ಹಾಗೂ ಕೆ.ಸಿ. ಎಸ್. (ಸಿಸಿಎ) ನಿಯಮಗಳು 1957ರ ನಿಯಮ 14 (ಎ) ಮೇರೆಗೆ ಉಪಲೋಕಾಯುಕ್ತರಿಗೆ ವಹಿಸುವ ಕುರಿತು ಪ್ರಸ್ತಾಪಿಸಲಾಗಿದೆ.

ಮೇಲೆ ಓದಲಾದ ಕ್ರ.ಸಂ. (4)ರ 10.07.2002ರ ಪತ್ರದಲ್ಲಿ ಕರ್ನಾಟಕ ಲೋಕಾಯುಕ್ತ ಪೊಲೀಸ್ ವಿಭಾಗವು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಲು ಒಪ್ಪಿಗೆ ನೀಡಿರುವ ಅಂಶವನ್ನು ಗಮನಿಸಬಹುದಾಗಿದೆ. ಸದರಿ ಪತ್ರದ ಹಿನ್ನೆಲೆಯಲ್ಲಿ ಶ್ರೀಯುತ ಬಿ. ಗಿರೀಶ್, ಹಿಂದಿನ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಜಿಲ್ಲಾ ಅಧಿಕಾರಿ ಇವರಿಗೆ ಸಂಬಂಧಿಸಿದಂತೆ ಕೆ.ಸಿ.ಎಸ್. (ಸಿಸಿಎ) ನಿಯಮಗಳು 1957ರ ನಿಯಮ 11(ಎ) ಮೇರೆಗೆ ಇಲಾಖಾ ವಿಚಾರಣೆ ನಡೆಸಿದ್ದು, ಇಲಾಖಾ ವಿಚಾರಣೆಯು ಪರಿಶೀಲನೆ ಹಂತದಲ್ಲಿದೆ.

ಮೇಲೆ ಓದಲಾದ ಕ್ರ.ಸಂ. (5)ರಲ್ಲಿನ ಪತ್ರಗಳಲ್ಲಿನ ಅಂಶಗಳನ್ನು ಸರ್ಕಾರವು ಪರಿಶೀಲಿಸಿ, ಈ ಹಿಂದೆ ಕೈಗೊಳ್ಳಲಾದ ನಿರ್ಣಯವನ್ನು ಪುನರ್ ಪರಿಶೀಲಿಸಿ, ದಿನಾಂಕ: 24.07.2003, ದಿನಾಂಕ: 13.10.2003 ರಲ್ಲಿ ನಮೂದಿಸಲಾದ ಅಂಶಗಳನ್ನು ಗಮನಿಸಿ, ಪ್ರಕರಣವನ್ನು ಪುನರ್ ಪರಿಶೀಲಿಸಿ, ಆರೋಪಿತ ಅಧಿಕಾರಿಗಳನ್ನು ಅಭಿಯೋಜನೆಗೊಳಿಸಲು ಮಂಜೂರಾತಿ ನೀಡುವುದು ಅವಶ್ಯವೆಂದು ಸರ್ಕಾರ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 343 ಬಿಇಟಿ 2000, ಬೆಂಗಳೂರು, ದಿನಾಂಕ: 7ನೇ ಜುಲೈ, 2005**

ಪ್ರಸ್ತಾವನೆಯಲ್ಲಿ ತಿಳಿಯಪಡಿಸಲಾದ ವಿವರಗಳ ಹಿನ್ನೆಲೆಯಲ್ಲಿ ಸರ್ಕಾರಿ ಪತ್ರ ಸಂಖ್ಯೆ: ಸಕಇ 343 ಬಿಇಟಿ 2000, ದಿನಾಂಕ: 22.09.2001ನ್ನು ಹಿಂದಕ್ಕೆ ಪಡೆಯುತ್ತಾ ಲಂಚನಿರೋಧ ಕಾಯಿದೆ 1988ರ ಜೊತೆ ಓದಲಾದ ಕಲಂ 13 (2)ರ ಪ್ರಕಾರ ಶ್ರೀಯುತ ಬಿ. ಗಿರೀಶ್, ಹಿಂದಿನ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿ, ಚಾಮರಾಜನಗರ ಹಾಲಿ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಜಿಲ್ಲಾ ಅಧಿಕಾರಿ, ಉಡುಪಿ ಇವರ ಮೇಲೆ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಸರ್ಕಾರವು ಅಭಿಯೋಜನೆ ಮಂಜೂರಾತಿ ನೀಡಿ, ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1024 **ಎಂ.ಎಸ್. ಮರುಳಸಿದ್ದಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ಶ್ರೀ ರಾಮಕೃಷ್ಣಯ್ಯ, ಸಹಾಯಕ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಮೈಸೂರು ಇವರ ಮೇಲೆ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದ ಇಲಾಖಾ ವಿಚಾರಣೆ ನಡೆಸಿ ದೋಷಮುಕ್ತರನ್ನಾಗಿ ಪರಿಗಣಿಸುವ ಬಗ್ಗೆ.

**ಓದಲಾಗಿದೆ :**
1. ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಅರೆಸರ್ಕಾರಿ ಪತ್ರ ಸಂಖ್ಯೆ: ಕಂಪ್ಲೇಂಟ್, ಉಪಲೋಕ. ಎಂ.ವೈಎಸ್ 38/ 00-01/ ಎಆರ್ಎಲ್ಓ-4, ದಿನಾಂಕ: 12.11.2002.
2. ಸರ್ಕಾರಿ ಆದೇಶ ಸಂಖ್ಯೆ: ಆನಾಸ 114 ಕಾಮಾಸೇ 2002, ದಿನಾಂಕ: 14.01.2003.
3. ಮಾನ್ಯ ಉಪಲೋಕಾಯುಕ್ತರು, ಬೆಂಗಳೂರು ಇವರ ಅರೆಸರ್ಕಾರಿ ಪತ್ರಸಂಖ್ಯೆ: ಲೋಕ್/ಎಆರ್ಇ-4/ ಇಎನ್ಕ್ಯೂ-93/ 2002-03, ದಿನಾಂಕ: 17.06.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಮಾನ್ಯ ಉಪಲೋಕಾಯುಕ್ತ, ಬೆಂಗಳೂರು ಇವರು ಹೆಚ್ಚುವರಿ ನಿಬಂಧಕರು, ವಿಚಾರಣೆಗಳು-4ರವರ ದಿನಾಂಕ: 29.11.2004ರ ವರದಿಯನ್ನು ಕಳುಹಿಸಿ ಶ್ರೀ ರಾಮಕೃಷ್ಣಯ್ಯ, ಹಿಂದಿನ ಸಹಾಯಕ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಮೈಸೂರುರವರು ಶ್ರೀ ರಾಜು ಎಂಬುವರಿಂದ ಅವರ ಮೈಸೂರಿನಲ್ಲಿಯ ಆರು ಕಂಪನಿಗಳಿಗೆ ತೂಕ ಮತ್ತು ಅಳತೆಯ ಸಾಮಾನುಗಳನ್ನು ತಪಾಸಣೆ ಪರವಾನಗಿ ನೀಡಲು ರೂ.2000/-ಗಳ ಲಂಚವನ್ನು ಕೇಳಿ ಸ್ವೀಕರಿಸಿದ್ದು, ಲೋಕಾಯುಕ್ತ, ಬೆಂಗಳೂರು ಇವರು ಈ ಬಗ್ಗೆ ದೂರು ದಾಖಲಿಸಿ ವಿಚಾರಣೆ ನಡೆಸಿ ರಾಜ್ಯ ಲೋಕಾಯುಕ್ತರಿಗೆ ವರದಿ ಸಲ್ಲಿಸಿರುತ್ತಾರೆ. ಲೋಕಾಯುಕ್ತ ನಿಬಂಧಕರು ಈ ಪ್ರಕರಣದಲ್ಲಿ ಕರ್ನಾಟಕ ಲೋಕಾಯುಕ್ತ ಅಧಿನಿಯಮ 12(4)ರನ್ವಯ ಕ್ರಮ ತೆಗೆದುಕೊಳ್ಳುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ರಾಮಕೃಷ್ಣಯ್ಯ, ಹಿಂದಿನ ಸಹಾಯಕ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಮೈಸೂರು ಇವರ ವಿರುದ್ಧ ದಾಖಲಾಗಿರುವ ಆರೋಪಗಳ ಬಗ್ಗೆ ಕರ್ನಾಟಕ ನಾಗರಿಕ ಸೇವೆಗಳು (ಸಿಸಿಎ) ನಿಯಮಾವಳಿಗಳು 1957ರ ನಿಯಮ 14(ಎ) ಮೇರೆಗೆ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಉಪಲೋಕಾಯುಕ್ತ, ಬೆಂಗಳೂರು ಇವರಿಗೆ ವಹಿಸಿಕೊಡಲಾಗಿರುತ್ತದೆ.

ಮೇಲೆ (3)ರಲ್ಲಿ ಓದಲಾದ ಮಾನ್ಯ ಉಪಲೋಕಾಯುಕ್ತ, ಬೆಂಗಳೂರು ಇವರು ಹೆಚ್ಚುವರಿ ನಿಬಂಧಕರು, ವಿಚಾರಣೆಗಳು-4, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿನಾಂಕ: 29.11.2004ರ ಶಿಫಾರಸ್ಸು ಹಾಗೂ ಅವರ ದಿನಾಂಕ: 29.11.2004ರ ವಿಚಾರಣಾ ವರದಿ ಹಾಗೂ ದಾಖಲೆಗಳನ್ನು ಸಲ್ಲಿಸಿರುತ್ತಾರೆ. ಹೆಚ್ಚುವರಿ ನಿಬಂಧಕರು, ವಿಚಾರಣೆಗಳು-4, ಕರ್ನಾಟಕ ಲೋಕಾಯುಕ್ತರವರ ದಿನಾಂಕ: 29.11.2004ರ ವಿವರವಾದ ವರದಿಯ ಆಧಾರದ ಮೇಲೆ ಮಾನ್ಯ ಉಪಲೋಕಾಯುಕ್ತರವರು ಶ್ರೀ ರಾಮಕೃಷ್ಣಯ್ಯ, ಸಹಾಯಕ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಮೈಸೂರು ಅವರ ವಿರುದ್ಧ ಲಂಚ ಸ್ವೀಕೃತಿ ಆರೋಪವು ವಿಚಾರಣೆಯಲ್ಲಿ ರುಜುವಾತಾಗಿಲ್ಲದಿರುವುದರಿಂದ, ಈ ಪ್ರಕರಣವನ್ನು ಕೈಬಿಡಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ. ಆದ್ದರಿಂದ ಸರ್ಕಾರವು ಇವರನ್ನು ಆರೋಪಗಳಿಂದ ದೋಷಮುಕ್ತರನ್ನಾಗಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 114 ಕಾಮಾಸೇ 02, ಬೆಂಗಳೂರು, ದಿನಾಂಕ: 16ನೇ ಜುಲೈ, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ರಾಮಕೃಷ್ಣಯ್ಯ, ಸಹಾಯಕ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಮೈಸೂರು ಇವರ ಮೇಲೆ ಸರ್ಕಾರಿ ಆದೇಶ ಸಂಖ್ಯೆ: ಆನಾಸ 114 ಕಾಮಾಸೇ 2002, ದಿನಾಂಕ: 14.01.2003ರಂತೆ ಕರ್ನಾಟಕ ನಾಗರಿಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 14(ಎ)ರನ್ವಯ ಪ್ರಾರಂಭಿಸಲಾದ ಇಲಾಖಾ ವಿಚಾರಣೆಯನ್ನು ಈ ಮೂಲಕ ಕೈಬಿಟ್ಟು ಆರೋಪಗಳಿಂದ ದೋಷಮುಕ್ತರನ್ನಾಗಿ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ**

ಪಿ.ಆರ್.1028 ಪೀಠಾಧಿಕಾರಿ, ಆಹಾರ-1, ಶಾಖೆ,

ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಸಿ. ಚನ್ನೇಗೌಡ, ಉಪ ಕುಲಸಚಿವರು (ಸ್ವತಂತ್ರ ಪ್ರಭಾರ) ಇವರ ಗುತ್ತಿಗೆ ಆಧಾರದ ನೇಮಕಾತಿಯ ಷರತ್ತು ಹಾಗೂ ನಿಬಂಧನೆಗಳು.

**ಓದಲಾಗಿದೆ :** ಅಧಿಸೂಚನೆ ಸಂಖ್ಯೆ: ಸಿಆಸುಇ 06 ಸಆಸೇ 2005, ದಿನಾಂಕ: 23.03.2005 ಹಾಗೂ ತಿದ್ದೋಲೆ ಸಮ ಸಂಖ್ಯೆ: ದಿನಾಂಕ: 16.04.2005.

**ಪ್ರಸ್ತಾವನೆ:**

ಮೇಲೆ ಓದಲಾದ ಅಧಿಸೂಚನೆಯಲ್ಲಿ ಶ್ರೀ ಸಿ ಚನ್ನೇಗೌಡ, ಉಪ ಕುಲಸಚಿವರು (ಸ್ವತಂತ್ರ ಪ್ರಭಾರ) ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮಾನಸಗಂಗೋತ್ರಿ, ಮೈಸೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳ ನಿಯಮ 15 (i) (iii) ರನ್ವಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ವಿಶೇಷ ಕರ್ತವ್ಯಾಧಿಕಾರಿಯಾಗಿ ಗುತ್ತಿಗೆ ಆಧಾರದ ಮೇಲೆ ನೇಮಿಸಲಾಗಿದೆ. ಅಧಿಕಾರಿಯವರ ಗುತ್ತಿಗೆ ಆಧಾರದ ನೇಮಕಾತಿಯ ಷರತ್ತು ಹಾಗೂ ನಿಬಂಧನೆಗಳನ್ನು ನಿಗದಿಪಡಿಸುವ ಅಗತ್ಯತೆಯನ್ನು ಮನಗಂಡು ಕೆಳಕಂಡಂತೆ, ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 06, ಸಅಸೇ, 2005, ಬೆಂಗಳೂರು, ದಿನಾಂಕ: 15ನೇ ಜುಲೈ, 2005**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ವಿಶೇಷ ಕರ್ತವ್ಯಾಧಿಕಾರಿ ಹುದ್ದೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳ ನಿಯಮ 15 (i) (iii) ರನ್ವಯ ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡಿರುವ ಶ್ರೀ ಸಿ. ಚನ್ನೇಗೌಡ ರವರ ಗುತ್ತಿಗೆ ಆಧಾರದ ನೇಮಕಾತಿಯ ನಿಬಂಧನೆ ಹಾಗೂ ಷರತ್ತುಗಳನ್ನು ಈ ಆದೇಶದ ಅನುಬಂಧದಲ್ಲಿ ವಿವರಿಸಲಾಗಿದೆ.

ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ 7 ದಿನಗಳ ಒಳಗಾಗಿ 50.00 (ಐವತ್ತು) ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ನೌಕರರಿಂದ ಬರೆಯಿಸಿಕೊಳ್ಳತಕ್ಕದ್ದು.

ಸದರಿ ಸರ್ಕಾರದ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1208 ವೆಚ್ಚ-5/ 2005, ದಿನಾಂಕ: 07.07.2005 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

## ANNEXURE

Sri C. Channegowda is appointed on contract basis on the following terms and conditions:

1. **PERIOD:** The period of contract of Sri C. Channegowda Deputy Registrar (Independent charge) Karnataka State Open University Manasagangotry, Mysore is for the period to be Co-terminus with the office of the Minister for Health and Family Welfare or so long as the service of Sri C. Channegowda are required in the said office, whichever is earlier.

2. **COMMENCEMENT AND END OF CONTRACT:** The contract shall commence on the date on which the official takes charge of the post under the Government and ends on the date on which he hands over charge of the post under the Government.

3. **PAY & OTHER ALLOWANCES:**During the period of contract, Sri C. Channegowda shall be entitled to pay including DA/HRA/CCA admissible to him in his parent organisation. He shall be entitled to special pay admissible to the post in the Minister's establishment. However he shall not be entitled to any other deputation or foreign service allowance. He will also not be eligible for special allowances like lunch allowance/ overtime allowance/ bonus/ Ex-gratia etc., attached to the post or attached to the parent organization.

4. **LEAVE RULES:** He will be governed by the Leave Rules applicable to him in his Parent Organisation.

5. **LEAVE SALARY CONTRIBUTION:** The Government shall pay Leave Salary contribution at the rate of 11% of pay.

6. **PENSION CONTRIBUTION:** Pension Contribution shall be paid by the Government at provisional rate of 1/8th of pay.

7. **MEDICAL CONCESSION:** The Official shall be entitled to the medical attendance as per the Karnataka Government Servants (Medical Attendance) Rules 1963.

8. He shall perform the functions of Officer on Special Duty to Minister and attend to all work entrusted to him from time to time by the said Minister.

9. He shall perform his duties diligently and he shall maintain strict secrecy in respect of official information which he comes to know in the course of his duties.

10. He shall be liable to reimburse to Government all the losses which the Government may sustain due to misconduct of any sort on his Part.

**U.P. PRABHU**
Under Secretary to Government,
DPAR (Services-2).

PR-1029

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಯ ಹುದ್ದೆಗಳ ಮುಂದುವರಿಕೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 48 ಸಸಿವಿ 2002, ದಿನಾಂಕ: 07.03.2003.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 48 ಸಸಿವಿ 2002, ದಿನಾಂಕ: 03.06.2003.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 17 ಸಸಿವಿ 2004, ದಿನಾಂಕ: 06.01.2005.
4. ಆಡಳಿತಾಧಿಕಾರಿ ಹಾಗೂ ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ, ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಡಿಡಿಪಿಇಆರ್ 23 ಎಂಇಎ 2004, ದಿನಾಂಕ: 10.02.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ: 07.03.2003ರಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಗೆ ಒಟ್ಟು 56 ಹುದ್ದೆಗಳನ್ನು ಮಂಜೂರು ಮಾಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಿಮೆಗಳ ಸುಧಾರಣೆ ಇಲಾಖೆಗೆ ಒಂದು ಜಂಟಿ ನಿರ್ದೇಶಕರ ಹುದ್ದೆಯನ್ನು ಹೆಚ್ಚುವರಿಯಾಗಿ ದಿನಾಂಕ: 07.03.2004 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಮಾತ್ರ ಸೃಜಿಸಲಾಗಿದೆ. ಹಾಗೂ ದಿನಾಂಕ: 07.03.2003ರ ಆದೇಶದಲ್ಲಿ ಮಂಜೂರು ಮಾಡಲಾದ ಒಂದು ಸಹಾಯಕರ ಹುದ್ದೆಯನ್ನು ರದ್ದುಪಡಿಸುವ ನಿಬಂಧನೆಗೊಳಪಟ್ಟು ಒಂದು ಉಪ ನಿರ್ದೇಶಕರ ಹಾಗೂ ಒಂದು ಹಿರಿಯ ಸಹಾಯಕರ ಹುದ್ದೆಗಳನ್ನು ದಿನಾಂಕ: 07.03.2003 ರಿಂದ ಮುಂದುವರಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ದಿನಾಂಕ: 03.06.2003ರಲ್ಲಿ ಸೃಜಿಸಲಾದ ಜಂಟಿ ನಿರ್ದೇಶಕರ ಹುದ್ದೆಯನ್ನು ದಿನಾಂಕ: 07.03.2004 ರಿಂದ 06.03.2005 ರವರೆಗೆ ಮುಂದುವರೆಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಅಧೀನ ಕಾರ್ಯದರ್ಶಿ, ಡಿ.ಡಿ.ಪಿ.ಇ.ಆರ್. ಇವರು ಸದರಿ ಹುದ್ದೆಗಳ ಕಾಲಾವಧಿಯು ದಿನಾಂಕ: 06.03.2005ಕ್ಕೆ ಮುಕ್ತಾಯವಾಗಿರುವುದರಿಂದ ಆ ಹುದ್ದೆಗಳನ್ನು ಮುಂದುವರೆಸಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸಸಿವಿ 2005, ಬೆಂಗಳೂರು, ದಿನಾಂಕ: 14ನೇ ಜುಲೈ, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಬಂಡವಾಳ ಹಿಂತೆಗೆಯುವಿಕೆ ಹಾಗೂ ಸಾರ್ವಜನಿಕ ಉದ್ದಮೆಗಳ ಇಲಾಖೆಗೆ ಮಂಜೂರು ಮಾಡಿರುವ ಈ ಕೆಳಕಂಡ 58 ಹುದ್ದೆಗಳನ್ನು ದಿನಾಂಕ: 07.03.2005 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲಾಗಿದೆ.

| | | |
|---|---|---|
| 1. | ಅಪರ ನಿರ್ದೇಶಕರು | 01 ಹುದ್ದೆ |
| 2. | ಆರ್ಥಿಕ ಸಲಹೆಗಾರರು | 01 ಹುದ್ದೆ |
| 3. | ಜಂಟಿ ನಿರ್ದೇಶಕರು ಹಾಗೂ ಪದನಿಮಿತ್ತ ಉಪ ಕಾರ್ಯದರ್ಶಿ | 02 ಹುದ್ದೆಗಳು |
| 4. | ಉಪ ನಿರ್ದೇಶಕರು ಹಾಗೂ ಪದನಿಮಿತ್ತ ಅಧೀನ ಕಾರ್ಯದರ್ಶಿ | 04 ಹುದ್ದೆಗಳು |
| 5. | ಆಡಳಿತಾಧಿಕಾರಿ ಹಾಗೂ ಪದನಿಮಿತ್ತ ಅಧೀನ ಕಾರ್ಯದರ್ಶಿ, (ಆಡಳಿತ-1) | 01 ಹುದ್ದೆ |
| 6. | ಶಾಖಾಧಿಕಾರಿ | 01 ಹುದ್ದೆ |
| 7. | ಸಹಾಯಕ ನಿರ್ದೇಶಕರು | 02 ಹುದ್ದೆಗಳು |
| 8. | ಪತ್ರಾಂಕಿತ ಆಪ್ತ ಸಹಾಯಕರು | 01 ಹುದ್ದೆ |
| 9. | ಭಾಷಾಂತರಕಾರರು (ಶಾಖಾಧಿಕಾರಿ) | 01 ಹುದ್ದೆ |
| 10. | ಹಿರಿಯ ಸಹಾಯಕರು | 02 ಹುದ್ದೆಗಳು |
| 11. | ಲೆಕ್ಕಪತ್ರ ಅಧೀಕ್ಷಕರು | 01 ಹುದ್ದೆ |
| 12. | ಸಹಾಯಕ ಸಾಂಖ್ಯಿಕ ಅಧಿಕಾರಿ | 01 ಹುದ್ದೆ |
| 13. | ಶೀಘ್ರಲಿಪಿಗಾರರು (ಗಣಕ ಯಂತ್ರ ಜ್ಞಾನವನ್ನು ಹೊಂದಿರುವವರು) | 12 ಹುದ್ದೆಗಳು |
| 14. | ಸಹಾಯಕರು | 03 ಹುದ್ದೆಗಳು |
| 15. | ಡಾಟಾ ಎಂಟ್ರಿ ಆಪರೇಟರ್ | 02 ಹುದ್ದೆಗಳು |
| 16. | ಅಕೌಂಟೆಂಟ್: ಕ್ಯಾಷಿಯರ್ | 02 ಹುದ್ದೆಗಳು |
| 17. | ಕಿರಿಯ ಸಹಾಯಕರು | 05 ಹುದ್ದೆಗಳು |
| 18. | ಬೆರಳಚ್ಚುಗಾರರು | 01 ಹುದ್ದೆ |
| 19. | ಚಾಲಕರು | 04 ಹುದ್ದೆಗಳು |
| 20. | ದಲಾಯತ್ | 11 ಹುದ್ದೆಗಳು |
| | **ಒಟ್ಟು** | **58 ಹುದ್ದೆಗಳು** |

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

ಪಿ.ಆರ್.1030

## ಇಂಧನ ಸಚಿವಾಲಯ

**ವಿಷಯ :** ಮೆ: ಬಳ್ಳಾರಿ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ದಾವಣಗೆರೆ ಜಿಲ್ಲೆಯಲ್ಲಿ ಹಂಚಿಕೆ ಮಾಡಲಾದ 7.50 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನಾ ಸಾಮರ್ಥ್ಯವನ್ನು 16.50 ಮೆ.ವ್ಯಾ.ಗೆ ಹೆಚ್ಚಿಸುವ ಬಗ್ಗೆ ಆದೇಶ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 243 ಎನ್‌ಸಿಇ 2002, ದಿನಾಂಕ: 05.03.2003.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/ 08/ BWPPL/ 2005/756, ದಿನಾಂಕ: 13/19.04.2005.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆ: ಬಳ್ಳಾರಿ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ದಾವಣಗೆರೆ ಜಿಲ್ಲೆಯ ಅಣಬೂರು ಮತ್ತು ಸೊಕ್ಕೆ ಎಂಬಲ್ಲಿ 7.5 ಮೆ.ವ್ಯಾ ಸಾಮಥ್ಯಧ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು, ಓದಲಾದ (2) ಪತ್ರದಲ್ಲಿ ಮೆ: ಬಳ್ಳಾರಿ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ದಾವಣಗೆರೆ ಜಿಲ್ಲೆಯ ಅಣಬೂರು ಮತ್ತು ಸೊಕ್ಕೆ ಎಂಬಲ್ಲಿ ಹಂಚಿಕೆ ಮಾಡಲಾಗಿರುವ 7.5 ಮೆಗಾವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು 16.5 ಮೆಗಾವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲು ಶಿಫಾರಸ್ಸು ಮಾಡಿರುವುದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಂಇ 126 ಎನ್‌ಸಿಇ 2005, ಬೆಂಗಳೂರು, ದಿನಾಂಕ: 13ನೇ ಜುಲೈ, 2005**

ಮೆ: ಬಳ್ಳಾರಿ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ದಾವಣಗೆರೆ ಜಿಲ್ಲೆಯ ಅಣಬೂರು ಮತ್ತು ಸೊಕ್ಕೆ ಎಂಬಲ್ಲಿ ಹಂಚಿಕೆ ಮಾಡಲಾಗಿರುವ 7.5 ಮೆಗಾವ್ಯಾಟ್ ಸಾಮರ್ಥ್ಯದ ಪವರ ವಿದ್ಯುತ್ ಯೋಜನೆಯನ್ನು 16.5 ಮೆಗಾವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್.1032

**ವಿಷಯ :** ಮೆ: ಫಿಜಾ ಡೆವಲಪರ್ಸ್ ಅಂಡ್ ಇಂಟರ್ ಟ್ರೇಡ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ದಿನಾಂಕ: 10.11.2003 ರಂದು 25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗಾಗಿ ಮಾಡಿಕೊಂಡಿರುವ ಒಡಂಬಡಿಕೆಯ ಕಾಲಾವಕಾಶವನ್ನು ವಿಸ್ತರಿಸುವ ಬಗ್ಗೆ ಆದೇಶ.

**ಓದಲಾಗಿದೆ :**
1. ಸರ್ಕಾರದೊಂದಿಗೆ ಮಾಡಿಕೊಂಡಿರುವ ಒಡಂಬಡಿಕೆ ದಿನಾಂಕ: 10.11.2003.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/ 08/ ಫಿಜಾ/ 2005/ 1002 ದಿನಾಂಕ: 25.05.2005.

**ಪ್ರಸ್ತಾವನೆ:**

ಓದಲಾದ (1)ರ ಒಡಂಬಡಿಕೆಯಲ್ಲಿ ಮೆ: ಫಿಜಾ ಡೆವಲಪರ್ಸ್ ಅಂಡ್ ಇಂಟರ್ ಟ್ರೇಡ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ತುಮಕೂರು ಜಿಲ್ಲೆಯ ಚಿಕ್ಕನಾಯಕನ ಹಳ್ಳಿಯಲ್ಲಿ 25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗಾಗಿ ಒಡಂಬಡಿಕೆಯನ್ನು ಮಾಡಿಕೊಳ್ಳಲಾಗಿದೆ. ಸದರಿ ಒಡಂಬಡಿಕೆಯ ಅಂಶ-9ರಲ್ಲಿ ಅಭಿವೃದ್ದಿದಾರರು ಸಂಬಂಧಿತ ಇಲಾಖೆಗಳಿಂದ ಒಂದು ವರ್ಷದೊಳಗಾಗಿ (ಒಡಂಬಡಿಕೆಯ ದಿನಾಂಕದಿಂದ) ಅನುಮತಿ ಪಡೆಯಬೇಕು ಹಾಗೂ ಪವನ ಅಧ್ಯಯನ ಅಗತ್ಯ ಇಲ್ಲದಿದ್ದಲ್ಲಿ ಎರಡು ವರ್ಷದೊಳಗಾಗಿ ಅನುಮತಿ ಪಡೆಯಬೇಕೆಂಬ ಷರತ್ತು ವಿಧಿಸಲಾಗಿದೆ.

ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಅರಣ್ಯ ಮತ್ತು ಪರಿಸರ ಮಂತ್ರಾಲಯದಿಂದ ಅನುಮತಿ ತೆಗೆದುಕೊಳ್ಳಲು ಎರಡು ವರ್ಷಗಳ ಕಾಲಾವಕಾಶಬೇಕೆಂದು ಅಭಿವೃದ್ದಿದಾರರು ಕೋರಿರುವ ಹಿನ್ನೆಲೆಯಲ್ಲಿ ಸದರಿ ಯೋಜನೆಗೆ ಎರಡು ವರ್ಷಗಳ ಕಾಲಾವಕಾಶವನ್ನು ವಿಸ್ತರಿಸಲು ಶಿಫಾರಸ್ಸು ಮಾಡಿರುವುದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 174 ಎನ್‌ಸಿಇ 2005, ಬೆಂಗಳೂರು, ದಿನಾಂಕ: 13ನೇ ಜುಲೈ, 2005**

ಮೆ: ಫಿಜಾ ಡೆವಲಪರ್ಸ್ ಅಂಡ್ ಇಂಟರ್ ಟ್ರೇಡ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿಯಲ್ಲಿ 25 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗಾಗಿ ಕಾಲಾವಕಾಶವನ್ನು ಮುಂದಿನ ಎರಡು ವರ್ಷಗಳ ಅವಧಿಗೆ ವಿಸ್ತರಿಸಲಾಗಿದೆ.

ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

ಪಿ.ಆರ್.1033

**ವಿಷಯ :** ಮೆ: ವಾಸು ಪವರ್ ಟೆಕ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 2 ಮೆಗಾ ವ್ಯಾಟ್ ಸಾಮರ್ಥ್ಯದ ಕೆಳಗೂರು ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ ಆದೇಶ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಡಿಇ 28 ಎನ್‌ಸಿಇ 96(7), ದಿನಾಂಕ: 24.07.1996.
2. ಸರ್ಕಾರಿ ಆದೇಶ ಸಂಖ್ಯೆ: ಇಂಇ 199 ಎನ್‌ಸಿಇ 2002, ದಿನಾಂಕ: 27.01.2003.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ/ 06/ ಕೆಳಗೂರು/ 2005/ 1160 ದಿನಾಂಕ: 04.07.2005.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆ: ವಾಸು ಬಿಲ್ಡರ್ಸ್ (ಈಗಿನ ಹೆಸರು ಮೆ: ವಾಸು ಪವರ್ ಟೆಕ್ ಪ್ರೈವೇಟ್ ಲಿಮಿಟೆಡ್) ಕಂಪನಿಗೆ 2 ಮೆಗಾ ವ್ಯಾಟ್ ಸಾಮರ್ಥ್ಯದ ಕೆಳಗೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಚಿಕ್ಕಮಗಳೂರು ಜಿಲ್ಲೆಯ ಕೆಳಗೂರು ಗ್ರಾಮದ ಕೆಳಗೂರು ಹೊಳೆಗೆ ಅಡ್ಡಲಾಗಿ ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಆದೇಶದಲ್ಲಿ ಸದರಿ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಒಂದು ವರ್ಷಗಳವರೆಗೆ ವಿಸ್ತರಿಸಲಾಗಿದೆ.

ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಸದರಿ ಅಭಿವೃದ್ಧಿದಾರರು ಯೋಜನಾ ಸ್ಥಳದ ಸರ್ವೇಕ್ಷಣೆಗಾಗಿ ಹೋಗಲು ದಾರಿ ಇರದೆ ಸಂಬಂಧಿತ ಜಮೀನುದಾರರೊಂದಿಗೆ ಚರ್ಚಿಸಿ ಅವರಿಗೆ ತಿಳುವಳಿಕೆ ನೀಡುವಲ್ಲಿ ವಿಳಂಬವಾಯಿತು ಎಂದು ತಿಳಿಸುವ ಹಿನ್ನೆಲೆಯಲ್ಲಿ ಸದರಿ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ: 30.09.2006 ರವರೆಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುವುದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 196 ಎನ್‌ಸಿಇ 2005, ಬೆಂಗಳೂರು, ದಿನಾಂಕ: 12ನೇ ಜುಲೈ, 2005**

ಮೆ: ವಾಸು ಪವರ್ ಟೆಕ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಚಿಕ್ಕಮಗಳೂರು ಜಿಲ್ಲೆಯ ಕೆಳಗೂರು ಗ್ರಾಮದ ಕೆಳಗೂರು ಹೊಳೆಗೆ ಅಡ್ಡಲಾಗಿ ಹಂಚಿಕೆ ಮಾಡಲಾಗಿರುವ 2 ಮೆಗಾ ವ್ಯಾಟ್ ಸಾಮರ್ಥ್ಯದ ಕೆಳಗೂರು ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ: 30.09.2006ರ ವರೆಗೆ ವಿಸ್ತರಿಸಲಾಗಿದೆ. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್.1034 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ಶ್ರೀ ಆರ್. ಪರಮೇಶ್ವರ, ಆಹಾರ ನಿರೀಕ್ಷಕರು, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ ಮೈಸೂರು ಇವರ ಮೇಲೆ ಲೋಕಾಯುಕ್ತ ಟ್ರ್ಯಾಪ್ ಪ್ರಕರಣದ ಇಲಾಖಾ ವಿಚಾರಣೆ ನಡೆಸಿ ದೋಷಮುಕ್ತರನ್ನಾಗಿ ಪರಿಗಣಿಸುವ ಬಗ್ಗೆ.

**ಓದಲಾಗಿದೆ :**
1. ನಿಬಂಧಕರು, ರಾಜ್ಯ ಲೋಕಾಯುಕ್ತ ಇಲಾಖೆ, ಬೆಂಗಳೂರು ಇವರ ಅರೆಸರ್ಕಾರಿ ಪತ್ರ ಸಂಖ್ಯೆ: ಕಂಪ್ಲೆಂಟ್, ಉಪಲೋಕ. ಎಂ.ವೈ.ಎಸ್ 75/ 98-99/ ಎಆರ್‌ಎಲ್‌ಓ-4, ದಿನಾಂಕ: 06.12.1999.
2. ಸರ್ಕಾರಿ ಆದೇಶ ಸಂಖ್ಯೆ: ಅನಾಸ 172 ಇಎಫ್‌ಟಿ 98, ದಿನಾಂಕ: 06.01.2000.
3. ಮಾನ್ಯ ಉಪಲೋಕಾಯುಕ್ತ, ಕರ್ನಾಟಕ, ಬೆಂಗಳೂರು ಇವರ ಅರೆಸರ್ಕಾರಿ ಪತ್ರಸಂಖ್ಯೆ: ಲೋಕ್/ಎಆರ್‌ಇ-1/ ಇಎನ್‌ಕ್ಯೂ-65/ 2002-03, ದಿನಾಂಕ: 13.06.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಮಾನ್ಯ ಉಪಲೋಕಾಯುಕ್ತರ ದಿನಾಂಕ: 24.11.1999ರ ವರದಿಯನ್ನು ಕಳುಹಿಸಿ ಶ್ರೀ ಪರಮೇಶ್ವರ, ಆಹಾರ ನಿರೀಕ್ಷಕರು, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ, ಮೈಸೂರಿನಲ್ಲಿ ಕೆಲಸ ನಿರ್ವಹಿಸುತ್ತಿದ್ದ ಸಮಯದಲ್ಲಿ ಶ್ರೀ ಎನ್. ರಾಜು, ಎನ್.ಆರ್. ಮೊಹಲ್ಲಾ, ಮೈಸೂರು ಇವರಿಂದ ಅವರಿಗೆ ಪ್ರತಿ ತಿಂಗಳೂ ಕೋಟಾ 17 ಬ್ಯಾರೆಲ್ ಸೀಮೆಎಣ್ಣೆ ವಿತರಣೆಗಾಗಿ ನೀಡುವುದಕ್ಕೆ 2000/- ರೂಪಾಯಿಗಳ ಲಂಚವನ್ನು ಕೇಳಿರುವುದಾಗಿಯೂ, ಇವರ ವಿರುದ್ಧ ಲೋಕಾಯುಕ್ತ ಪೊಲೀಸ್, ಮೈಸೂರು ಇಲ್ಲಿ ದಿನಾಂಕ: 25.06.1997ರಂದು ದೂರು ದಾಖಲಿಸಿರುತ್ತಾರೆ. ಅವರ ದೂರನ್ನು ಪರಿಶೀಲಿಸಿ ತನಿಖೆಯನ್ನು ನಡೆಸಿ ರಾಜ್ಯ ಲೋಕಾಯುಕ್ತರವರಿಗೆ ವರದಿಯನ್ನು ಸಲ್ಲಿಸಿರುತ್ತಾರೆ. ಲೋಕಾಯುಕ್ತ ನಿಬಂಧಕರು ಈ ಪ್ರಕರಣದಲ್ಲಿ ಕರ್ನಾಟಕ ಲೋಕಾಯುಕ್ತದ ಅಧಿನಿಯಮ 12 (4)ರನ್ವಯ ಕ್ರಮ ತೆಗೆದುಕೊಳ್ಳುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಆರ್. ಪರಮೇಶ್ವರ, ಅಂದಿನ ಆಹಾರ ನಿರೀಕ್ಷಕರು, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ, ಮೈಸೂರು ಇವರ ವಿರುದ್ಧ ಮಾಡಲಾಗಿರುವ ಆರೋಪಗಳ ಬಗ್ಗೆ ಕರ್ನಾಟಕ ನಾಗರಿಕ ಸೇವೆಗಳು (ಸಿಸಿಎ) ನಿಯಮಾವಳಿಗಳು 1957ರ ನಿಯಮ 14(ಎ) ಮೇರೆಗೆ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಉಪಲೋಕಾಯುಕ್ತ, ಬೆಂಗಳೂರು ಇವರಿಗೆ ವಹಿಸಿಕೊಡಲಾಗಿರುತ್ತದೆ.

ಮೇಲೆ (3)ರಲ್ಲಿ ಓದಲಾದ ಮಾನ್ಯ ಉಪಲೋಕಾಯುಕ್ತ, ಬೆಂಗಳೂರು ಇವರು ಉಪ ನಿಬಂಧಕರು, ವಿಚಾರಣೆಗಳು-1, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ದಿನಾಂಕ: 25.02.2005ರ ಶಿಫಾರಸ್ಸು ಹಾಗೂ ಅವರ ದಿನಾಂಕ: 25.02.2005ರ ವಿಚಾರಣಾ ವರದಿ ಹಾಗೂ ದಾಖಲೆಗಳನ್ನು ಸಲ್ಲಿಸಿರುತ್ತಾರೆ. ಉಪನಿಬಂಧಕರು, ವಿಚಾರಣೆಗಳು-1, ಕರ್ನಾಟಕ ಲೋಕಾಯುಕ್ತರವರ ದಿನಾಂಕ:25.02.2005ರ ವಿಚಾರಣಾ ವರದಿಯ ಆಧಾರದ ಮೇಲೆ ಮಾನ್ಯ ಉಪಲೋಕಾಯುಕ್ತರವರು ಶ್ರೀ ಆರ್. ಪರಮೇಶ್ವರ, ಅಂದಿನ ಆಹಾರ ನಿರೀಕ್ಷಕರು, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ, ಮೈಸೂರು ಅವರ ವಿರುದ್ಧ ಲಂಚ ಸ್ವೀಕೃತ ಆರೋಪವು ವಿಚಾರಣೆಯನ್ನು ರುಜುವಾತಾಗಿಲ್ಲದಿರುವುದರಿಂದ, ಈ ಪ್ರಕರಣವನ್ನು ಕೈಬಿಡಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ. ಆದ್ದರಿಂದ, ಸರ್ಕಾರವು ಇವರನ್ನು ಆರೋಪಗಳಿಂದ ದೋಷಮುಕ್ತರನ್ನಾಗಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅನಾಸ 172 ಇಎಫ್‌ಟಿ 98, ಬೆಂಗಳೂರು, ದಿನಾಂಕ: 14ನೇ ಜುಲೈ, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಆರ್. ಪರಮೇಶ್ವರ, ಅಂದಿನ ಆಹಾರ ನಿರೀಕ್ಷಕರು, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ, ಮೈಸೂರು ಇವರ ಮೇಲೆ ಸರ್ಕಾರಿ ಆದೇಶ ಸಂಖ್ಯೆ: ಅನಾಸ 172 ಇಎಫ್‌ಟಿ 98, ದಿನಾಂಕ: 06.01.2000ರಂತೆ ಕರ್ನಾಟಕ ನಾಗರಿಕ ಸೇವಾ (ಸಿಸಿಎ) ನಿಯಮಾವಳಿ 1957ರ ನಿಯಮ 14(ಎ)ರನ್ವಯ ಪ್ರಾರಂಭಿಸಲಾದ ಇಲಾಖಾ ವಿಚಾರಣೆಯನ್ನು ಈ ಮೂಲಕ ಕೈಬಿಟ್ಟು ಆರೋಪಗಳಿಂದ ದೋಷಮುಕ್ತರನ್ನಾಗಿ ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ**

ಪಿ.ಆರ್.1035 ಪೀಠಾಧಿಕಾರಿ, ಆಹಾರ-1, ಶಾಖೆ,
ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಡಿ.ಎನ್. ಪಾಪಣ್ಣ, ಪಿ.ಎಸ್.ಐ., ಚಿಕ್ಕಮಗಳೂರು ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಅರ್ಜಿ ಬಗ್ಗೆ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಇವರ ಆದೇಶ ಸಂಖ್ಯೆ: ಪನ್ನಿ/ ಆರ್-8/ 95-96 ಓಬಿ ಸಂಖ್ಯೆ: ದಿನಾಂಕ: 29.01.1997.
2. ಅರ್ಜಿದಾರರ ಮೇಲ್ಮನವಿ ಅರ್ಜಿ ದಿನಾಂಕ: 20.04.2002.
3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಇವರ ಪತ್ರದ ಸಂಖ್ಯೆ: ಅಪೀಲು/2/ 20/ 2002-03, ದಿನಾಂಕ: 04.03.2003.

**ಪ್ರಸ್ತಾವನೆ:**

ಶ್ರೀ ಡಿ.ಎನ್. ಪಾಪಣ್ಣ, ಪಿಎಸ್ಐ, ಲಿಂಗದಹಳ್ಳಿ ಪೊಲೀಸ್ ಠಾಣೆ ಇವರ ವಿರುದ್ಧ, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:** "1. ಆಪಾದಿತ ಪೊಲೀಸ್ ಅಧಿಕಾರಿ ಶ್ರೀ ಡಿ.ಎಸ್. ಪಾಪಣ್ಣ ಆದ ನೀವು ಲಿಂಗದಹಳ್ಳಿ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಉಪನಿರೀಕ್ಷಕರವರಾಗಿ ಕರ್ತವ್ಯ ನಿರ್ವಹಿಸುತ್ತಿರುವಿರಿ, ಸದರಿ ಠಾಣಾ ಮೊ.ನಂ.70/94 ಕಲಂ 379 ಐಪಿಸಿ ಪ್ರಕರಣದ ತನಿಖಾಧಿಕಾರಿಯಾಗಿದ್ದು, ಲೋಪಯುಕ್ತ ತನಿಖೆ ನಡೆಸಿ ಕರ್ತವ್ಯಲೋಪವೆಸಗಿರುತ್ತೀರಿ.

2. ಆಪಾದಿತ ಪೊಲೀಸ್ ಅಧಿಕಾರಿಗಳಾದ ನೀವು ದಿನಾಂಕ: 29.10.1994 ರಂದು ತರೀಕೆರೆ ವೃತ್ತ ನಿರೀಕ್ಷಕರವರ ಕಛೇರಿಗೆ ಬೆಳಿಗ್ಗೆ 11 ರಿಂದ 12 ಗಂಟೆ ಸಮಯದಲ್ಲಿ ಹೋಗಿದ್ದು, ಅಲ್ಲಿದ್ದ ಶ್ರೀ ಅಶೋಕಸಾಲ್ಯಾನ ರವರಿಗೂ ನಿಮಗೂ ಮಾತಿನ ಘರ್ಷಣೆ ನಡೆದಿದ್ದನ್ನು ಠಾಣೆಯ ಯಾವುದೇ ದಾಖಲಾತಿಗಳಲ್ಲಿ ನಮೂದಿಸದೇ, ನೀವು ಆದ್ಯ ಕರ್ತವ್ಯಕ್ಕೆ ಘೋರ ನಿರ್ಲಕ್ಷತೆಯನ್ನು ತೋರಿಸಿ, ಕರ್ತವ್ಯಲೋಪವೆಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು, ಆರೋಪ ಸಾಬೀತಾಗಿದೆಯೆಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 29.01.1997ರ ಆದೇಶದಲ್ಲಿ ಅರ್ಜಿದಾರರಿಗೆ ಒಂದು ವಾರ್ಷಿಕ ವೇತನ ಬಡ್ತಿಯನ್ನು ತದನಂತರ ಗಳಿಸುವ ವಾರ್ಷಿಕ ವೇತನ ಬಡ್ತಿಗೆ ಪರಿಣಾಮ ಬೀರದಂತೆ ಒಂದು ವರ್ಷ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ. ಈ ಆದೇಶವು ಹಾಲಿ ಇರುವ ಶಿಕ್ಷೆಯು ಮುಗಿದ ನಂತರ ಜಾರಿಗೆ ಬರುವುದಾಗಿ ವಿಧಿಸಿರುವ ನಿಬಂಧನೆಯನ್ವಯ ವಿಧಿಸಲಾಗಿದೆ ಎಂದು ಆದೇಶಿಸಿರುತ್ತಾರೆ. ಈ ಆದೇಶ ವಿರುದ್ಧ ಅರ್ಜಿದಾರರು ಅವರು ನಿವೃತ್ತಿ ಹೊಂದಿದ ನಂತರ ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನೂ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ದೀರ್ಘ ಸೇವಾ ಅವಧಿಯ ಅನುಭವ ಇದ್ದರೂ, ಅವರು ಅದನ್ನು ಸಮಯೋಚಿತವಾಗಿ ಉಪಯೋಗಿಸಿಕೊಂಡು ಲಿಂಗದಹಳ್ಳಿ ಪೊಲೀಸ್ ಠಾಣೆ ತಕ್ಷೀರು ಸಂಖ್ಯೆ: 70/94 ರಲ್ಲಿ ತನಿಖೆಯನ್ನು ಸಮರ್ಪಕವಾಗಿ ನಿರ್ವಹಿಸಲು ವಿಫಲರಾಗಿ ಲೋಪಯುಕ್ತ ತನಿಖೆ ನಡೆಸಿರುತ್ತಾರೆ. ಈ ವಿರುದ್ಧ ಇಲಾಖಾ ವಿಚಾರಣೆ ನಡೆಸಿ, ಶಿಕ್ಷೆ ವಿಧಿಸಿದ್ದು, ಈ ಆದೇಶದ ವಿರುದ್ಧ 5 ವರ್ಷ 2 ತಿಂಗಳ ವರೆಗೆ ಮೇಲ್ಮನವಿ ಸಹ ಸಲ್ಲಿಸಿರುವುದಿಲ್ಲ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 199 ಪೊಸಿಅ 2005 (184 ಪೊಸಿಅ 2002), ಬೆಂಗಳೂರು, ದಿನಾಂಕ: 12ನೇ ಜುಲೈ, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ, 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ.ಎಸ್. ಪಾಪಣ್ಣ, ಪಿಎಸ್ಐ (ಹಾಲಿ ನಿವೃತ್ತರು) ಚಿಕ್ಕಮಗಳೂರು ಜಿಲ್ಲೆ, ಇವರು ದಿನಾಂಕ: 20.04.2002 ರಂದು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್.1041

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಕುಂದಗೋಳ ತಾಲ್ಲೂಕು ಯರೇಬೂದಿಯಾಳ ಶಾಲಾಕಟ್ಟಡ ಕಳಪೆ ಕಾಮಗಾರಿಗೆ ಸಂಬಂಧಿಸಿದಂತೆ ಶ್ರೀ ಎಂ.ಡಿ. ಹುರುಳಿಕುಪ್ಪಿ, ಅಂದಿನ ಕಾರ್ಯಪಾಲಕ ಇಂಜಿನಿಯರ್ (ನಿವೃತ್ತ), ಜಿಪಂಇಂಉವಿ, ಧಾರವಾಡ ಇವರ ಮೇಲಿನ ಇಲಾಖಾ ವಿಚಾರಣೆ- ದಂಡನೆ ವಿಧಿಸುವ ಬಗ್ಗೆ-ಆದೇಶ.

**ಓದಲಾಗಿದೆ :**
1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಧಾರವಾಡ ಇವರ ಪತ್ರ ಸಂಖ್ಯೆ: ಧಾಜಿಪಂ: ಉಕಾ:ಸಿ-7: ಸಿಆರ್:249:02-03, ದಿನಾಂಕ: 23.12.2002.
2. ಶ್ರೀ ಎಂ.ಡಿ. ಹುರುಳಿಕುಪ್ಪಿ, ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಕುಂದಗೋಳ ಮತ್ತು ಶ್ರೀ ಎಂ.ಕೆ. ಗೋವಿಂದಣ್ಣನವರ್ ಕಿರಿಯ ಇಂಜಿನಿಯರ್, ಜಿಲ್ಲಾ ಪಂಚಯತ್ ಇಂಜಿನಿಯರಿಂಗ್ ಉಪ ವಿಭಾಗ, ಕುಂದಗೋಳ ಇವರಿಗೆ ಜಾರಿಗೊಳಿಸಿರುವ ಕಾರಣ ಕೇಳುವ ನೋಟೀಸ್ ಸಂಖ್ಯೆ: ಗ್ರಾಅಪ:1: ಇಎನ್‌ಕ್ಯೂ: 03, ದಿನಾಂಕ: 20.09.2003.
3. ಶ್ರೀ ಎಂ.ಡಿ. ಹುರುಳಿಕುಪ್ಪಿ, ಕಾರ್ಯಪಾಲಕ ಇಂಜಿನಿಯರ್, ಇವರ ದಿನಾಂಕ: 15.10.2003ರ ಮನವಿ.
4. ಶ್ರೀ ಎಂ.ಡಿ. ಹುರುಳಿಕುಪ್ಪಿ, ಕಾರ್ಯಪಾಲಕ ಇಂಜಿನಿಯರ್, ಇವರ ದಿನಾಂಕ: 28.10.2003ರ ಲಿಖಿತ ಹೇಳಿಕೆಗಳು.
5. ಆದೇಶ ಸಂಖ್ಯೆ: ಗ್ರಾಅಪ:1: ಇಎನ್‌ಕ್ಯೂ: 03, ದಿನಾಂಕ: 01.12.2003. ಶ್ರೀ ಎಂ.ಡಿ. ಹುರುಳಿಕುಪ್ಪಿ, ಅಂದಿನ ಕಾಇಂ, ಶ್ರೀ ಎನ್. ಬಸವರಾಜ್, ಅಂದಿನ ಸಕಾಇಂ, ಶ್ರೀ ಎಂ.ಕೆ. ಗೋವಿಂದಣ್ಣನವರ್, ಕಿರಿಯ ಇಂಜಿನಿಯರ್ ಇವರುಗಳಿಗೆ ಜಾರಿ ಮಾಡಿದ್ದ ಎರಡನೇ ಕಾರಣ ಕೇಳುವ ನೋಟಿಸ್ ಸಂಖ್ಯೆ: ಗ್ರಾಅಪ:1:ಇಎನ್‌ಕ್ಯೂ:03, ದಿನಾಂಕ: 26.07.2004.

6. ಶ್ರೀ ಎಂ.ಡಿ. ಹುರುಳಿಕುಪ್ಪಿ, ನಿವೃತ್ತ ಕಾಇಂ ಇವರ ದಿನಾಂಕ: 17.08.2004ರ ಲಿಖಿತ ಹೇಳಿಕೆ.
7. ಶ್ರೀ ಎನ್. ಬಸವರಾಜು, ಕಾಇಂ ಇವರ ಲಿಖಿತ ಹೇಳಿಕೆ.
8. ಶ್ರೀ ಎಂ.ಕೆ. ಗೋವಿಂದಣ್ಣನವರ್, ಕಿರಿಯ ಇಂಜಿನಿಯರ್, ಇವರ ಲಿಖಿತ ಹೇಳಿಕೆ.
9. ಆದೇಶ ಸಂಖ್ಯೆ: ಗ್ರಾಅಪ: 01: ಇಎನ್‌ಕ್ಯೂ:03, ದಿನಾಂಕ: 24.01.2005.
10. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಇವರ ಪತ್ರ ಸಂಖ್ಯೆ: ಪಿಎಸ್‌ಸಿ:5: ಸಿಎನ್‌ಎಸ್-ಒ5, ದಿನಾಂಕ: 27.04.2005.

**ಪ್ರಸ್ತಾವನೆ:**

2000-01ನೇ ಸಾಲಿನಲ್ಲಿ ಡಿಪಿಇಪಿ ಯೋಜನೆ ಅಡಿ ಕುಂದಗೋಳ ತಾಲ್ಲೂಕು ಯರೇಬೂದೀಹಾಳ್ ಗ್ರಾಮದ ಪ್ರಾಥಮಿಕ ಶಾಲಾ ಕಟ್ಟಡ ಕಾಮಗಾರಿಯನ್ನು ನಿಗದಿತ ಅವದಿಯೊಳಗೆ ಪೂರ್ಣಗೊಳಿಸದೇ, ಅದಕ್ಕೆ ಬಿಡುಗಡೆಯಾಗಿದ್ದ ಅನುದಾನವನ್ನು ಸಹ ವಿನಿಯೋಗಿಸದೇ ಕಾಮಗಾರಿಯನ್ನು ಅರ್ಧಕ್ಕೆ ನಿಲ್ಲಿಸಿದ್ದರೆಂಬ ಬಗ್ಗೆ ಶ್ರೀ ಎಂ.ಡಿ. ಹುರಳಿಕುಪ್ಪಿ, ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಧಾರವಾಡ, ಶ್ರೀ ಎನ್. ಬಸವರಾಜ್, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್, ಇಂಜಿನಿಯರಿಂಗ್ ಉಪ ವಿಭಾಗ, ಕುಂದಗೋಳ ಮತ್ತು ಶ್ರೀ ಎಂ.ಕೆ. ಗೋವಿಂದಣ್ಣನವರ್, ಕಿರಿಯ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಕುಂದಗೋಳ ಇವರ ಮೇಲೆ ಇಲಾಖಾ ವಿಚಾರಣೆ ಹೂಡುವಂತೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಧಾರವಾಡ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ: 23.12.2002, ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು. ಸರ್ಕಾರವು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ವರದಿಯನ್ನು ಪರಿಶೀಲಿಸಿ ಮೇಲೆ ಹೇಳಲಾದ ಮೂವರು ಇಂಜಿನಿಯರ್‌ಗಳ ಮೇಲೆ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ, ಅಪೀಲು) ನಿಯಮ 1957ರ ನಿಯಮ 11ರಂತೆ ಇಲಾಖಾ ವಿಚಾರಣೆ ಹೂಡಲು ನಿರ್ಧರಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ದಿನಾಂಕ: 20.09.2003ರ ಕಾರಣ ಕೇಳುವ ನೋಟೀಸ್‌ನೊಂದಿಗೆ ಆರೋಪ ಪಟ್ಟಿ ಜಾರಿ ಮಾಡಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ: (3) ಮತ್ತು (4) ರಂತೆ ಶ್ರೀ ಎಂ.ಡಿ. ಹುರುಳಿಕುಪ್ಪಿ, ಕಾರ್ಯಪಾಲಕ ಇಂಜಿನಿಯರ್ ಇವರ ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸಿ ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿದ್ದರು. ಪ್ರಕರಣದಲ್ಲಿ ಒಳಗೊಂಡ ಇನ್ನಿಬ್ಬರೂ ಆಪಾದಿತ ಇಂಜಿನಿಯರ್‌ಗಳು ನಿಗದಿತ ಸಮಯದಲ್ಲಿ ತಮ್ಮ ಲಿಖಿತ ಹೇಳಿಕೆ ಸಲ್ಲಿಸಲಿಲ್ಲವಾದ್ದರಿಂದ ಪ್ರಕರಣದ ಸತ್ಯಾಸತ್ಯತೆಯನ್ನು ಅರಿಯಲು ವಿವರವಾದ ವಿಚಾರಣೆ ನಡೆಸಲು ಸರ್ಕಾರವು ನಿರ್ಧರಿಸಿದ ಮೇಲೆ ಓದಲಾದ ಕ್ರಮ ಸಂಖ್ಯೆ: (5)ರ ದಿನಾಂಕ: 01.12.2003ರ ಆದೇಶದಲ್ಲಿ ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿತ್ತು. ಅದರಂತೆ ವಿಚಾರಣಾಧಿಕಾರಿಗಳು ಪ್ರಕರಣದಲ್ಲಿ ವಿವರವಾದ ವಿಚಾರಣೆ ನಡೆಸಿ ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ದಿನಾಂಕ: 08.07.2004ರ ವಿಚಾರಣಾ ವರದಿಯನ್ನು ಸಲ್ಲಿಸಿದ್ದರು. ವಿವರವಾದ ವಿಚಾರಣೆಯಲ್ಲಿ ಆಪಾದಿತರ ಮೇಲಿನ ಆಪಾದನೆ ರುಜುವಾತಾಗುತ್ತದೆ ಎಂದು ವಿಚಾರಣಾಧಿಕಾರಿಗಳು ವರದಿ ಮಾಡಿದ್ದರು. ವಿಚಾರಣಾ ವರದಿಯಂತೆ ಮುಂದಿನ ಕ್ರಮ ಜರುಗಿಸುವ ಮುನ್ನ ಮೇಲೆ ಓದಲಾದ ಕ್ರಮ ಸಂಖ್ಯೆ: (7)ರ ದಿನಾಂಕ: 26.07.2004ರ ಎರಡನೇ ಕಾರಣ ಕೇಳುವ ನೋಟೀಸ್‌ನೊಂದಿಗೆ ವಿಚಾರಣಾ ವರದಿಯನ್ನು ಆಪಾದಿತ ಇಂಜಿನಿಯರ್‌ಗಳಿಗೆ ಜಾರಿ ಮಾಡಲಾಗಿತ್ತು. ಮೂವರು ಆಪಾದಿತ ಇಂಜಿನಿಯರ್‌ಗಳು ತಮ್ಮ ಮೇಲಿನ ಆಪಾದನೆಗಳನ್ನು ಕ್ರಮ ಸಂಖ್ಯೆ: (8)ರಲ್ಲಿ ನಿರಾಕರಿಸಿದ್ದು ತಮ್ಮ ಹೇಳಿಕೆಗಳನ್ನು ಸಮರ್ಥಿಸಿಕೊಳ್ಳಲು ಯಾವುದೇ ದಾಖಲಾತಿಗಳನ್ನು, ಸಾಕ್ಷ್ಯಾಧಾರಗಳನ್ನು ಒದಗಿಸಿರುವುದಿಲ್ಲ.

ಆಪಾದಿತರ ಮೇಲಿನ ಆರೋಪ, ವಿಚಾರಣಾ ವರದಿ ಮತ್ತು ಎರಡನೇ ಕಾರಣ ಕೇಳುವ ನೋಟೀಸ್‌ಗೆ ಅವರು ನೀಡಿರುವ ಲಿಖಿತ ಹೇಳಿಕೆಯನ್ನು ಪರಿಶೀಲಿಸಲಾಗಿ ಆಪಾದನೆಯಲ್ಲಿ ಒಳಗೊಂಡ ಶಾಲಾ ಕಟ್ಟಡ ಡಿಪಿಇಪಿ ಯೋಜನೆಯಡಿ ಮಂಜೂರಾಗಿದ್ದು, ಅದನ್ನು ದಿನಾಂಕ:17.01.2000ರಂದು ಆದ ಕರಾರಿನಂತೆ ಒಂದು ವರ್ಷದೊಳಗಾಗಿ ಮುಗಿಸಬೇಕಾಗಿತ್ತು. ಪೂರ್ಣ ಹಣ ಬಿಡುಗಡೆಯಾದರೂ ಸಹ 2001ರವರೆಗೆ ಕಟ್ಟಡ ಪೂರ್ಣವಾಗಿರಲಿಲ್ಲ. ಲಿಂಟಲ್‌ವರೆಗೆ ಬಂದ ಕಟ್ಟಡ ಕಳಪೆಯಾಗಿತ್ತು. 1ನೇ ಆಪಾದಿತ ಅಧಿಕಾರಿ ಈ ಅಂಶವನ್ನು ಸಭೆಯಲ್ಲಿ ಒಪ್ಪಿಕೊಂಡಿದ್ದು, 2002ರಲ್ಲೂ ಸಹ ಕಟ್ಟಡ ಪೂರ್ಣವಾಗಿರಲಿಲ್ಲ. ಕಳಪೆ ಕಾಮಗಾರಿ ಆಗಿದ್ದನ್ನು ಕೆಡವಿ ಹೊಸದಾಗಿ ಕಟ್ಟಲಾಯಿತು ಎಂದು ದಾಖಲೆಗಳಿಂದ ಸ್ಪಷ್ಟಪಡುತ್ತದೆ. ಇದಕ್ಕೆ ಮೂವರು ಆಪಾದಿತ ಅಧಿಕಾರಿಗಳು ಕಾರಣ ಎಂದು ದಾಖಲೆಗಳಿಂದ ರುಜುವಾತಾದ ಆಪಾದನೆಯ ಮಟ್ಟಕ್ಕನುಗುಣವಾಗಿ ಆಪಾದಿತ ಅಧಿಕಾರಿಗಳಿಗೆ ದಂಡನೆ ವಿಧಿಸಲು ಸರ್ಕಾರವು ನಿರ್ಣಯಿಸಿ ಸೇವೆಯಲ್ಲಿದ್ದ ಆಪಾದಿತ ಅಧಿಕಾರಿಗಳಾದ ಶ್ರೀ ಎನ್. ಬಸವರಾಜ್, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್, ಇಂಜಿನಿಯರಿಂಗ್ ಉಪವಿಭಾಗ, ಕುಂದಗೋಳ ಮತ್ತು ಶ್ರೀ ಎಂ.ಕೆ. ಗೋವಿಂದಣ್ಣನವರ್, ಕಿರಿಯ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಕುಂದಗೋಳ ಇವರುಗಳಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (9)ರ ಆದೇಶದಲ್ಲಿ ದಂಡನೆ ವಿಧಿಸಿ ಆದೇಶ ಹೊರಡಿಸಿದೆ. ಶ್ರೀ ಎಂ.ಡಿ.ಹುರಳಿಕುಪ್ಪಿ, ಕಾರ್ಯಪಾಲಕ ಇಂಜಿನಿಯರ್, ಇವರು ಸೇವೆಯಿಂದ ನಿವೃತ್ತಿ ಹೊಂದಿದ್ದರಿಂದ ಇವರಿಗೆ ದಂಡನೆ ವಿಧಿಸಲು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಕೋರಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ: (10)ರಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಸರ್ಕಾರದ ಪ್ರಸ್ತಾವನೆಗೆ ಸಹಮತಿ ನೀಡಿದ್ದು, ಸದರಿ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ ಗ್ರಾಅಪ 1 ಇಎನ್‌ಕ್ಯೂ 03, ಬೆಂಗಳೂರು, ದಿನಾಂಕ: 1ನೇ ಜುಲೈ, 2005**

ಈ ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಕುಂದಗೋಳ ತಾಲ್ಲೂಕು ಯರೇಬೂದಿಯಾಳ ಶಾಲಾ ಕಟ್ಟಡ ಕಳಪೆ ಕಾಮಗಾರಿಗೆ ಸಂಬಂಧಿಸಿದಂತೆ ನಡೆಸಲಾದ ವಿವರವಾದ ಇಲಾಖಾ ವಿಚಾರಣೆಯಲ್ಲಿ ಶ್ರೀ ಎಂ.ಡಿ. ಹುರಳಿಕುಪ್ಪಿ, ಅಂದಿನ ಕಾರ್ಯಪಾಲಕ ಇಂಜಿನಿಯರ್, (ನಿವೃತ್ತ), ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಧಾರವಾಡ ಇವರ ಮೇಲೆ ಸಾಬೀತಾದ ಆಪಾದನೆಗಳಿಗನುಗುಣವಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ-214ರನ್ವಯ ಸದರಿಯವರ ನಿವೃತ್ತಿ ವೇತನದಿಂದ ಶೇಕಡಾ 5ರಷ್ಟನ್ನು ಶಾಶ್ವತವಾಗಿ ತಡೆಹಿಡಿಯುವ ದಂಡನೆಯನ್ನು ವಿಧಿಸಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಎಸ್.ಸಿ. ಸುಂದರ

ಪಿ.ಆರ್.1016

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ :** ಗದಗ್ ಜಿ.ಪಂ.ಇಂ.ವಿ. ದಲ್ಲಿನ ಅಕ್ರಮಗಳಿಗೆ ಕಾರಣರಾದ ಶ್ರೀ ಸಿ.ಬಿ. ಕುಳಲಿ, ಅಂದಿನ ಕಾ.ಇಂ. (ನಿಧನ) ಇವರ ಮೇಲಿನ ಇಲಾಖಾ ವಿಚಾರಣೆ ದಂಡನೆ ವಿಧಿಸುವ ಬಗ್ಗೆ- ಆದೇಶ.

**ಓದಲಾಗಿದೆ :**

1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಧಾರವಾಡ ಇವರ ಪತ್ರ ಸಂಖ್ಯೆ: ಧಾಜಿಪಂ: ಉಕ1/ ಸಿ.5/ ಸಿಆರ್/75/ 96-97, ದಿನಾಂಕ: 07.12.1996.
2. ಶ್ರೀ ಸಿ.ಬಿ. ಕುಳಲಿ ಇವರಿಗೆ ಆರೋಪ ಪಟ್ಟಿಯೊಂದಿಗೆ ಜಾರಿಗೊಳಿಸಿರುವ ಕಾರಣ ಕೇಳುವ ನೋಟೀಸ್ ದಿನಾಂಕ: 09.01.98.
3. ಶ್ರೀ ಸಿ.ಬಿ. ಕುಳಲಿ, ಇವರ ದಿನಾಂಕ: 09.03.98ರ ಲಿಖಿತ ಹೇಳಿಕೆ.
4. ಆದೇಶ ಸಂಖ್ಯೆ: ಗ್ರಾಅಪ/ 271/ ಇಎನ್‌ಕ್ಯೂ/ 96 ದಿನಾಂಕ: 03.03.99.
5. ಆದೇಶ ಸಂಖ್ಯೆ: ಗ್ರಾಅಪ/ 271/ ಇಎನ್‌ಕ್ಯೂ/ 96 ದಿನಾಂಕ: 26.04.2003.
6. ವಿಚಾರಣಾಧಿಕಾರಿಗಳ ದಿನಾಂಕ: 12.01.2004ರ ವರದಿ.
7. ಎರಡನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಗ್ರಾಅಪ/ 271/ ಇಎನ್‌ಕ್ಯೂ/ 96 ದಿನಾಂಕ: 30.03.2004ರಂದು ದಿ: ಶ್ರೀ ಸಿ.ಬಿ. ಕುಳಲಿ, ಇವರ ಧರ್ಮಪತ್ನಿಯವರಿಗೆ ಜಾರಿ ಮಾಡಿದ್ದು.
8. ಶ್ರೀ ಸಿ.ಬಿ. ಕುಳಲಿ, ಅಂದಿನ ಕಾ.ಇಂ., ಇವರ ಪರವಾಗಿ ಇವರ ಪತ್ನಿಯವರ ಲಿಖಿತ ಹೇಳಿಕೆ.
9. ಆದೇಶ ಸಂಖ್ಯೆ: ಗ್ರಾಅಪ/271/ ಇಎನ್‌ಕ್ಯೂ/96, ದಿನಾಂಕ: 13.07.2004.
10. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಇವರಿಗೆ ಬರೆದ ಸಮಸಂಖ್ಯೆಯ ಪತ್ರದ ದಿನಾಂಕ: 28.06.2004 ಮತ್ತು 04.04.2005.
11. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಇವರ ಪತ್ರ ಸಂಖ್ಯೆ: ಪಿಎಸ್‌ಸಿ 53 ಸಿಎನ್‌ಎಸ್ 04, ದಿನಾಂಕ: 08.06.2005.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1)ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಧಾರವಾಡ ಇವರು ಗದಗ, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದಲ್ಲಿನ ಅಕ್ರಮಗಳಿಗೆ ಕಾರಣರಾದ ಶ್ರೀ ಸಿ.ಬಿ. ಕುಳಲಿ, ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಗದಗ ಮತ್ತು ಶ್ರೀ ಎನ್.ಡಿ. ತಿಮ್ಮಪ್ಪಗೌಡರ್, ಪ್ರಥಮ ದರ್ಜೆ ಉಗ್ರಾಣ ಪಾಲಕ ಇವರ ವಿರುದ್ಧ ಜಂಟಿ ಇಲಾಖೆ ವಿಚಾರಣೆ ನಡೆಸಲು ಆರೋಪ ಪಟ್ಟಿಯೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಅದರಂತೆ ಪ್ರಸ್ತಾವನೆಯನ್ನು ಪರಿಶೀಲಿಸಿ, ಮೇಲೆ ಓದಲಾದ ಕ್ರ.ಸಂ.(2)ರ ಪತ್ರದೊಂದಿಗೆ ಸದರಿಯವರಿಗೆ ಕಾರಣ ಕೇಳುವ ನೋಟೀಸ್‌ನೊಂದಿಗೆ ಆರೋಪ ಪಟ್ಟಿಯನ್ನು ಜಾರಿಗೊಳಿಸಲಾಗಿತ್ತು. ಸರ್ಕಾರದಿಂದ ಜಾರಿಗೊಳಿಸಿದ್ದ ಕಾರಣ ಕೇಳುವ ನೋಟೀಸ್‌ಗೆ ಆಪಾದಿತರಾದ ಶ್ರೀ ಸಿ.ಬಿ. ಕುಳಲಿ, ಇವರ ಮೇಲೆ ಓದಲಾದ ಕ್ರ.ಸಂ. (3)ರಂತೆ ಲಿಖಿತ ಹೇಳಿಕೆ ಸಲ್ಲಿಸಿ, ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿ ತಮ್ಮನ್ನು ದೋಷಮುಕ್ತಗೊಳಿಸುವಂತೆ ಕೋರಿದ್ದರು. ಆದರೆ ಅವರ ಲಿಖಿತ ಹೇಳಿಕೆಗಳು ಸಮರ್ಪಕವಲ್ಲವೆಂದು ಸರ್ಕಾರವು ಪರಿಗಣಿಸಿ ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆ ನಡೆಸುವುದು ಸೂಕ್ತವೆಂದು ನಿರ್ಣಯಿಸಿ, ವಿಭಾಗಾಧಿಕಾರಿಗಳು, ಬೆಳಗಾಂ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಉಪಕಾರ್ಯದರ್ಶಿ (ಆಡಳಿತ), ಜಿಲ್ಲಾ ಪಂಚಾಯತ್, ಧಾರವಾಡ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿತ್ತು. ಈ ಮಧ್ಯೆ ವಿಭಾಗಾಧಿಕಾರಿಗಳ ಹುದ್ದೆ ರದ್ದಾದ ಕಾರಣ ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆ ನಡೆಸಲು ವಿಭಾಗಾಧಿಕಾರಿಗಳು, ಬೆಳಗಾಂ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿರುವ ಆದೇಶವನ್ನು ಹಿಂಪಡೆದು ಮೇಲೆ ಓದಲಾದ ಕ್ರ.ಸಂ. (5)ರ ಆದೇಶದಲ್ಲಿ ಪ್ರಕರಣವನ್ನು ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಶ್ರೀ ಬಿ.ಎಲ್. ಶ್ರೀಕಂಠಯ್ಯ, ಇವರಿಗೆ ವಹಿಸಿ ಆದೇಶ ಹೊರಡಿಸಲಾಗಿತ್ತು. ಅದರಂತೆ ವಿಚಾರಣಾಧಿಕಾರಿಗಳು ಮೇಲೆ ಓದಲಾದ ಕ್ರ.ಸಂ. (6)ರಂತೆ ಸರ್ಕಾರಕ್ಕೆ ವಿಚಾರಣಾ ವರದಿ ಸಲ್ಲಿಸಿ ಒಂದನೇ ಆಪಾದಿತರಾದ ಶ್ರೀ ಸಿ.ಬಿ. ಕುಳಲಿ, ಇವರ ಮೇಲಿನ ಆಪಾದನೆಗಳು ಸಾಬೀತಾಗಿರುವುದಾಗಿ ಹಾಗೂ ಎರಡನೇ ಆಪಾದಿತರಾದ ಶ್ರೀ ಎನ್.ಡಿ. ತಿಮ್ಮಪ್ಪಗೌಡರ್, ಇವರ ಮೇಲಿನ ಆರೋಪಗಳು ಸಾಬೀತಾಗಿಲ್ಲವೆಂದು ತಿಳಿಸಿದ್ದರು. ಆದರೆ ವಿಚಾರಣಾಧಿಕಾರಿಯವರ ವರದಿಯನ್ನು ಕೆಸಿಎಸ್ (ಸಿಸಿಎ) ನಿಯಮಾವಳಿಗಳ ನಿಯಮ 11(ಎ)ರಂತೆ ಸರ್ಕಾರ ಒಪ್ಪದೆ ತನ್ನದೇ ಆದ ನಿರ್ಣಯಗಳನ್ನು ದಾಖಲಿಸಿ ಆಪಾದಿತರ ಮೇಲಿನ ಆರೋಪಗಳು ರುಜುವಾಗುತ್ತದೆಂದು ನಿರ್ಣಯಿಸಿ ಆಪಾದಿತರಾದ ಶ್ರೀ ಸಿ.ಬಿ. ಕುಳಲಿ, ಇವರು ನಿಧನ ಹೊಂದಿರುವುದರಿಂದ ಇವರ ಪತ್ನಿ ಶ್ರೀಮತಿ ದಾನಮ್ಮ ಇವರಿಗೆ ಮೇಲೆ ಓದಲಾದ ಕ್ರ.ಸಂ. (7)ರಲ್ಲಿ ಎರಡನೇ ಕಾರಣ ಕೇಳುವ ನೋಟೀಸನ್ನು ಜಾರಿಗೊಳಿಸಲಾಗಿತ್ತು. ಅದರಂತೆ ಮೇಲೆ ಓದಲಾದ ಕ್ರ.ಸಂ. (8)ರಲ್ಲಿ ಆಪಾದಿತರಾದ ದಿವಂಗತ ಶ್ರೀ ಸಿ.ಬಿ. ಕುಳಲಿ ಇವರ ಪತ್ನಿಯು ಲಿಖಿತ ಹೇಳಿಕೆಗಳನ್ನು ಸರ್ಕಾರವು ಪರಿಶೀಲಿಸಿ ಮೇಲೆ ಓದಲಾದ ಕ್ರ.ಸಂ. (9)ರ ಆದೇಶದಲ್ಲಿ ಅವರ ಹೇಳಿಕೆಗಳಲ್ಲಿ ನೀಡಿರುವ ವಿವರಣೆಯು ಸಮರ್ಪಕವಾಗಿಲ್ಲದ ಕಾರಣ ಶ್ರೀ ಸಿ.ಬಿ. ಕುಳಲಿ ಇವರಿಗೆ ದಂಡನೆ ವಿಧಿಸಲು ನಿರ್ಣಯಿಸಿ ಕರ್ನಾಟಕ ಲೋಕಸೇವಾ ಆಯೋಗದ ಸಮ್ಮತಿಯನ್ನು ಪಡೆಯಲು ನಿರ್ಧರಿಸಲಾಯಿತು. ಮೇಲೆ ಓದಲಾದ ಕ್ರ.ಸಂ. (10)ರ ಪತ್ರದಲ್ಲಿ ಶ್ರೀ ಸಿ.ಬಿ. ಕುಳಲಿ, ಇವರು ನಿಧನರಾಗಿರುವುದರಿಂದ ಸರ್ಕಾರಕ್ಕೆ ಉಂಟಾದ ಆರ್ಥಿಕ ನಷ್ಟವನ್ನು ಆರೋಪ ಒಂದರಲ್ಲಿ ಹೇಳಿರುವಂತೆ ಸದರಿ ಆಪಾದಿತರು ರೂ. 4,84,142-00ಗಳ ಮೊತ್ತದ ಉಗ್ರಾಣ ಸಾಮಗ್ರಿಗಳನ್ನು ಮಾನ್ಯತೆ ಪಡೆಯದ ಸಂಸ್ಥೆಗಳಿಂದ ನಿಗದಿಪಡಿಸಿದ ದರಕ್ಕಿಂತ ಶೇ.15ರಷ್ಟು ಹೆಚ್ಚಿನ ದರದಲ್ಲಿ ಖರೀದಿಸಿದ್ದಾರೆಂದು ಪರಿಗಣಿಸಿ ದುರುಪಯೋಗವಾಗಿದೆಯೆಂದು ನಿರ್ಧರಿಸಲಾದ ಮೊತ್ತವಾದ ರೂ. 72,621/-ಗಳನ್ನು ಇವರ ಡಿ.ಸಿ.ಆರ್.ಜಿ. ಯಿಂದ ವಸೂಲು ಮಾಡಲು ದಂಡನೆ ವಿಧಿಸುವ ಪ್ರಸ್ತಾವನೆಗೆ ಮೇಲೆ ಓದಲಾದ ಕ್ರ.ಸಂ. (10)ರ ದಿನಾಂಕ: 04.04.2005ರ ಪತ್ರದಲ್ಲಿ ಲೋಕಸೇವಾ ಆಯೋಗದ ಸಮ್ಮತಿಯನ್ನು ಕೋರಲಾಗಿತ್ತು. ಮೇಲೆ ಓದಲಾದ ಕ್ರ.ಸಂ. (11)ರಲ್ಲಿ ಶ್ರೀ ಸಿ.ಬಿ. ಕುಳಲಿ, ಅಂದಿನ ಕಾರ್ಯಪಾಲಕ ಇಂಜಿನಿಯರ್ (ನಿಧನ) ಇವರ ಡಿ.ಸಿ.ಆರ್.ಜಿ. ಯಿಂದ 72,621/-ಗಳನ್ನು ವಸೂಲು ಮಾಡುವಂತೆ ಕರ್ನಾಟಕ ಲೋಕಸೇವಾ ಆಯೋಗವು ಸಹಮತಿ ನೀಡಿದ್ದು, ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 271 ಇಎನ್‌ಕ್ಯೂ 96, ಬೆಂಗಳೂರು, ದಿನಾಂಕ: 8ನೇ ಜುಲೈ, 2005**

ಈ ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಗದಗ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದಲ್ಲಿನ ಅಕ್ರಮಗಳಿಗೆ ಸಂಬಂಧಿಸಿದಂತೆ ನಡೆಸಲಾದ ವಿವರವಾದ ಜಂಟಿ ಇಲಾಖಾ ವಿಚಾರಣೆಯಲ್ಲಿ ಶ್ರೀ ಸಿ.ಬಿ. ಕುಳಲಿ, ಅಂದಿನ ಕಾರ್ಯಪಾಲಕ ಇಂಜಿನಿಯರ್, (ನಿಧನ),

| ಕ್ರಮ ಸಂಖ್ಯೆ | ನಿಯತಕಾಲಿಕೆ ಹೆಸರು | ಪ್ರತಿಗಳ ಸಂಖ್ಯೆ |
|---|---|---|
| 6. | ಬಾಲಮಂಗಳ | 4 |
| 7. | ಬಾಲಮಿತ್ರ | 4 |
| 8. | Better Photography | 2 |
| 9. | Business India | 2 |
| 10. | Business Today | 2 |
| 11. | Business World | 2 |
| 12. | Capital Market | 2 |
| 13. | ಚಂಪಕ | 2 |
| 14. | Champaka (E) | 4 |
| 15. | ಚಂದಮಾಮ | 4 |
| 16. | Chandamama (E) | 4 |
| 17. | ಚುಟುಕ | 4 |
| 18. | Cine Blitz | 4 |
| 19. | Competetive Sucess Review | 4 |
| 20. | Computer @ Home | 2 |
| 21. | Developer | 2 |
| 22. | Dalal Street | 2 |
| 23. | Data Quest | 2 |
| 24. | Design and Interior | 2 |
| 25. | ದಿಕ್ಸೂಚಿ | 4 |
| 26. | Economic & Political Weekly | 4 |
| 27. | Electronics for You | 2 |
| 28. | Employment News | 4 |
| 29. | Express Computer | 2 |
| 30. | Femina | 4 |
| 31. | Filmfare | 4 |
| 32. | Frontline | 6 |
| 33. | ಗೃಹಶೋಭ | 8 |
| 34. | Health & Nutrition | 4 |
| 35. | ಹಾಯ್ ಬೆಂಗಳೂರು | 6 |
| 36. | ಹೊಸತು | 4 |
| 37. | India Today | 6 |
| 38. | India Today Plus | 2 |
| 39. | Inside Outside | 2 |
| 40. | ಜೀವನಾಡಿ | 4 |
| 41. | ಕರ್ಮವೀರ | 8 |
| 42. | ಕಸ್ತೂರಿ | 6 |
| 43. | ಲಂಕೇಶ ಪತ್ರಿಕೆ | 8 |
| 44. | ಮಲ್ಲಿಗೆ | 4 |
| 45. | ಮಂಗಳ | 4 |
| 46. | ಮಯೂರ | 8 |
| 47. | Mydoctor | 2 |
| 48. | Outlook | 6 |
| 49. | PC Quest | 2 |
| 50. | ಪ್ರಿಯಾಂಕ | 2 |
| 51. | ರಾಗಸಂಗಮ | 6 |
| 52. | Reader Digest | 4 |
| 53. | ರೂಪತಾರ | 6 |
| 54. | ಸರ್ಕಾರಿ ನೌಕರರ ಮಿತ್ರ | 2 |

| ಕ್ರಮ ಸಂಖ್ಯೆ | ನಿಯತಕಾಲಿಕೆ ಹೆಸರು | ಪ್ರತಿಗಳ ಸಂಖ್ಯೆ |
|---|---|---|
| 55. | Savvy | 4 |
| 56. | Screen | 4 |
| 57. | Society | 4 |
| 58. | Sports Star | 6 |
| 59. | Star Dust | 4 |
| 60. | Star Teller | 2 |
| 61. | ಸುಧಾ | 8 |
| 62. | ತರಂಗ | 8 |
| 63. | The Week | 6 |
| 64. | Time | 4 |
| 65. | Tinkle digest | 4 |
| 66. | ತುಂತುರು | 4 |
| 67. | ತುಷಾರ | 6 |
| 68. | Wisdom | 4 |
| 69. | Women'sera | 6 |
| 70. | ಓಮನಸ್ಸೇ | 4 |
| 71. | Chip | 2 |
| 72. | Hindi film magazine (any one) | 1 |
| 73. | Sarita | 1 |
| 74. | Navneet | 1 |
| 75. | Manohar Kahaniya | 1 |
| 76. | Gruhashobha | 1 |

**ತಃಖ್ತೆ-2**

**ದಿನಪತ್ರಿಕೆಗಳ ವಿವರ**

| ಕ್ರಮ ಸಂಖ್ಯೆ | ದಿನಪತ್ರಿಕೆಗಳ ಹೆಸರು | ಪ್ರತಿಗಳ ಸಂಖ್ಯೆ |
|---|---|---|
| 1. | ಕನ್ನಡ ಪ್ರಭ | 8 |
| 2. | ಉದಯವಾಣಿ | 6 |
| 3. | ಉಷಾಕಿರಣ | 6 |
| 4. | New Indian Express | 6 |
| 5. | Times of India | 6 |
| 6. | Economic Times | 4 |
| 7. | Financial Express | 4 |
| 8. | ವಿಜಯ ಕರ್ನಾಟಕ | 4 |
| 9. | ಪ್ರಜಾವಾಣಿ | 8 |
| 10. | ಸಂಯುಕ್ತ ಕರ್ನಾಟಕ | 8 |
| 11. | Asian Age | 4 |
| 12. | Deccan Herald | 6 |
| 13. | Hindu | 6 |
| 14. | Business Line | 3 |
| 15. | Business Standard | 4 |
| 16. | Vijay Times | 6 |
| 17. | ಸೂರ್ಯೋದಯ | 6 |

**ಡೇನಿಯಲ್ ಬರೆಟ್ಟೊ**
ಮುಖ್ಯ ಗ್ರಂಥಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ,
ಸಚಿವಾಲಯ ಗ್ರಂಥಾಲಯ.

ಪಿ.ಆರ್. 902

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಡಾ: ಎ.ಆರ್.ಮಂಜುನಾಥ್, ಸಾರ್ವಜನಿಕ ಸಂಪರ್ಕಾಧಿಕಾರಿ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಇವರ ಗುತ್ತಿಗೆ ಆಧಾರದ ನೇಮಕಾತಿಯ ಷರತ್ತು ಹಾಗೂ ನಿಬಂಧನೆಗಳು.

**ಓದಲಾಗಿದೆ:** ಅಧಿಸೂಚನೆ ಸಂಖ್ಯೆ:ಸಿಆಸುಇ 379 ಸಅಸೇ 2004, ದಿನಾಂಕ: 29.1.2005 ಹಾಗೂ ತಿದ್ದೋಲೆ ಸಮ ಸಂಖ್ಯೆ ದಿನಾಂಕ: 9.2.2005.

**ಪ್ರಸ್ತಾವನೆ:**

ಮೇಲೆ ಓದಲಾದ ಅಧಿಸೂಚನೆಯಲ್ಲಿ ಡಾ: ಎ.ಆರ್.ಮಂಜುನಾಥ್, ಸಾರ್ವಜನಿಕ ಸಂಪರ್ಕಾಧಿಕಾರಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ ಇವರನ್ನು ದಿನಾಂಕ: 16.12.2004 ರಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳ ನಿಯಮ 15 (i) (iii) ರನ್ವಯ ವಿಜ್ಞಾನ, ತಂತ್ರಜ್ಞಾನ ಹಾಗೂ ಸಣ್ಣ ಉಳಿತಾಯ ಸಚಿವರ ಆಪ್ತ ಕಾರ್ಯದರ್ಶಿಯಾಗಿ ಗುತ್ತಿಗೆ ಆಧಾರದ ಮೇಲೆ ನೇಮಿಸಲಾಗಿದೆ. ಅಧಿಕಾರಿಯವರ ಗುತ್ತಿಗೆ ಆಧಾರದ ನೇಮಕಾತಿಯ ಷರತ್ತು ಹಾಗೂ ನಿಬಂಧನೆಗಳನ್ನು ನಿಗದಿಪಡಿಸುವ ಅಗತ್ಯತೆಯನ್ನು ಮನಗಂಡು ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 379 ಸಅಸೇ 2004, ಬೆಂಗಳೂರು, ದಿನಾಂಕ:23ನೇ ಜೂನ್, 2005**

ವಿಜ್ಞಾನ, ತಂತ್ರಜ್ಞಾನ ಹಾಗೂ ಸಣ್ಣ ಉಳಿತಾಯ ಸಚಿವರ ಆಪ್ತ ಕಾರ್ಯದರ್ಶಿ ಹುದ್ದೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳ ನಿಯಮ 15 (i) (iii) ರನ್ವಯ ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡಿರುವ ಡಾ: ಎ.ಆರ್.ಮಂಜುನಾಥ್ ರವರ ಗುತ್ತಿಗೆ ಆಧಾರದ ನೇಮಕಾತಿಯ ನಿಬಂಧನೆ ಹಾಗೂ ಷರತ್ತುಗಳನ್ನು ಈ ಆದೇಶದ ಅನುಬಂಧದಲ್ಲಿ ವಿವರಿಸಲಾಗಿದೆ.

ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ 7 ದಿನಗಳ ಒಳಗಾಗಿ 50.00 (ಐವತ್ತು) ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ನೌಕರರಿಂದ ಬರೆಯಿಸಿಕೊಳ್ಳತಕ್ಕದ್ದು.

ಸದರಿ ಸರ್ಕಾರದ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1013 ವೆಚ್ಚ-5/2005, ದಿನಾಂಕ: 14.6.2005 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

## ANNEXURE

Dr.A.R.Manjunath is appointed on contract basis on the following terms and conditions:-

1. **PERIOD:** The period of contract of Dr.A.R.Manjunath, Public Relation Officer, Kannada University, Hampi is for the period to be co-terminus with the office of the Minister for small savings and Science & Technology or so long as the service of Dr.A.R.Manjunath are required in the said office, whichever is earlier.
2. **COMMENCEMENT AND END OF CONTRACT:** The contract shall commence on the date on which the official takes charge of the post under the Government and ends on the date on which he hands over charge of the post under the Government.
3. **PAY & OTHER ALLOWANCES:** During the period of contract, Dr.A.R.Manjunath shall be entitled to pay including DA/HRA/CCA admissible to him in his Parent Organisation. He shall be entitled to special pay admissible to the post in the Minister establishment. However he shall not be entitled to any other deputation or foreign service allowance. He will also not be eligible for special allowances like lunch allowance /overtime allowance / bonus / Ex-gratia etc., attached to the post or attached to the parent organization.
4. **LEAVE RULES:** He will be governed by the Leave Rules applicable to him in his parent organisation.
5. **LEAVE SALARY CONTRIBUTION:** The Government shall pay Leave Salary contribution at the rate of 11% of salary.
6. **PENSION CONTRIBUTION:** Pension contribution shall be paid by the Government at the provisional rate of 12.5% of salary.
7. **MEDICAL CONCESSION:** The official shall be entitled to the medical attendance as per the Karnataka Government Servants (Medical Attendance) Rules 1963.
8. He shall perform the functions of Private Secretary to Minister and attend to all work entrusted to him from time to time by the said Minister.
9. He shall perform his duties diligently and he shall maintain strict secrecy in respect of official information which he comes to know in the course of his duties.

**10.** He shall be liable to reimburse to Government all the losses which the Government may sustain due to misconduct of any sort on his part.

**U.P.PRABHU**
Under Secretary to Government,
DPAR (Services-2).

PR-929

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿ ಶಾಸ್ತ್ರ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಪರಿಸರ ಮತ್ತು ಜೀವಿ ಶಾಸ್ತ್ರ) ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 464 ಎಸ್ಎಎಸ್ 98, ದಿನಾಂಕ: 14.7.99.
2. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 464 ಎಸ್ಎಎಸ್ 98, ದಿನಾಂಕ: 22.5.2001.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 37 ಸಸಿವಿ 2004, ದಿನಾಂಕ: 19.5.2004.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿ ಶಾಸ್ತ್ರ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಪರಿಸರ ಮತ್ತು ಜೀವಿ ಶಾಸ್ತ್ರ) ಹುದ್ದೆಯನ್ನು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 22.5.2001ರ ಸರ್ಕಾರದ ಆದೇಶದಲ್ಲಿ ದಿನಾಂಕ: 26.3.2001 ರಿಂದ ಜಾರಿಗೆ ಬರುವಂತೆ 2 ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲಾಗಿರುತ್ತದೆ.

ಪ್ರಸ್ತುತ ಈ ವಿಸ್ತರಿತ ಅವಧಿಯು ದಿನಾಂಕ: 31.3.2005ಕ್ಕೆ ಮುಕ್ತಾಯಗೊಂಡಿರುತ್ತದೆ. ಆದುದರಿಂದ ಅರಣ್ಯ, ಪರಿಸರ ಮತ್ತು ಜೀವಿ ಶಾಸ್ತ್ರ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿ (ಪರಿಸರ ಮತ್ತು ಜೀವಿ ಶಾಸ್ತ್ರ) ಹುದ್ದೆಯನ್ನು ದಿನಾಂಕ: 1.4.2005 ರಿಂದ ಮುಂದುವರೆಸುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

### ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 40 ಸಸಿವಿ 2005, ಬೆಂಗಳೂರು, ದಿನಾಂಕ:27ನೇ ಜೂನ್, 2005

ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿ ಶಾಸ್ತ್ರ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಪರಿಸರ ಮತ್ತು ಜೀವಿ ಶಾಸ್ತ್ರ) ಹುದ್ದೆಯನ್ನು ದಿನಾಂಕ: 1.4.2005 ರಿಂದ 31.3.2006 ರವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-2).

ಪಿ.ಆರ್.933

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಸಹಕಾರ ಇಲಾಖೆಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 475 ಸೇಅಸೆ 2001, ದಿನಾಂಕ: 06.09.2001.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 475, ಸೇಅಸೆ 2001, ದಿನಾಂಕ: 19.07.2002.
3. ತಿದ್ದೋಲೆ ಸಂಖ್ಯೆ: ಸಿಆಸುಇ 475 ಸೇಅಸೆ 2001, ದಿನಾಂಕ: 01.08.2002.
4. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 475 ಸೇಅಸೆ 2001, ದಿನಾಂಕ: 01.08.2003.
5. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 48 ಸಸಿವಿ 2004, ದಿನಾಂಕ: 15.07.2004.
6. ಪ್ರಧಾನ ಕಾರ್ಯದರ್ಶಿ, ಸಹಕಾರ ಇಲಾಖೆ ಇವರ ಟಿಪ್ಪಣಿ ಸಂಖ್ಯೆ: ಸಿಎಂಡಬ್ಲ್ಯೂ/ ಪಿಎಸ್/ 117/ 2005, ದಿನಾಂಕ: 08.06.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ದಿನಾಂಕ: 6.9.2001ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಸಹಕಾರ ಇಲಾಖೆಯಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಐ.ಎ.ಎಸ್.ನ ಎಬೌ ಸೂಪರ್ ಟೈಂ ಸ್ಕೇಲ್ (ರೂ.22,400-24,500) ರಲ್ಲಿ ದಿನಾಂಕ: 2.8.2000 ದಿಂದ ಒಂದು ವರ್ಷದ ಅವಧಿಗೆ ಸೃಜಿಸಲಾಗಿತ್ತು. ನಂತರ ಈ ಹುದ್ದೆಯನ್ನು ಕಾಲಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗಿದ್ದು, ಅಂತಿಮವಾಗಿ ಕ್ರಮ ಸಂಖ್ಯೆ (6) ರಲ್ಲಿರುವ ದಿನಾಂಕ: 15.7.2004ರ ಸರ್ಕಾರದ ಆದೇಶದನ್ವಯ ವಿಸ್ತರಿಸಲಾದ ಅವಧಿಯು ದಿನಾಂಕ: 1.8.2005ಕ್ಕೆ ಮುಕ್ತಾಯಗೊಳ್ಳಲಿದೆ.

ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಹಕಾರ ಇಲಾಖೆ ಇವರು ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ದಿನಾಂಕ: 8.6.2005ರ ಟಿಪ್ಪಣಿಯಲ್ಲಿ ಈ ಹುದ್ದೆಯನ್ನು ಮುಂದುವರೆಸುವ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿದೆ.

### ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 44 ಸಸಿವಿ 2005, ಬೆಂಗಳೂರು, ದಿನಾಂಕ: 27ನೇ ಜೂನ್, 2005

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಸಹಕಾರ ಇಲಾಖೆಯಲ್ಲಿನ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ದಿನಾಂಕ: 2.8.2005 ರಿಂದ ಜಾರಿಗೆ ಬರುವಂತೆ ಮತ್ತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ. ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 69 ಆಶೀಸೆ 2003, ದಿನಾಂಕ: 14.7.2003 ರಲ್ಲಿ ನಿಗದಿಪಡಿಸಿರುವ ಹುದ್ದೆಗಳ ಪೈಕಿ ಸರ್ಕಾರ ಆದೇಶ ಸಂಖ್ಯೆ: ಸಿಆಸುಇ 287 ಶಿಸಾಸೇ 02, ದಿನಾಂಕ: 29.7.2002 ರಲ್ಲಿ ಸದರಿ ಇಲಾಖೆಯಲ್ಲಿನ ಭಾಷಾಂತರಕಾರರ ಹುದ್ದೆಯೊಂದನ್ನು ರದ್ದು ಪಡಿಸಿರುವುದರಿಂದ ಆ ಹುದ್ದೆಯನ್ನು ಹೊರತು

ಪಡಿಸಿ ಇನ್ನುಳಿದ ಆಪ್ತ ಶಾಖೆಗೆ ನಿಗದಿ ಪಡಿಸಿದ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರೆಸಲು ಸಹ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್.934

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–2).

## ಶಿಕ್ಷಣ ಸಚಿವಾಲಯ

**ವಿಷಯ:** ವಾಣಿಜ್ಯ ಶಾಲೆಗಳಲ್ಲಿ ಬೋಧನೆ ಶುಲ್ಕ ಮತ್ತು ಇತರೆ ಶುಲ್ಕಗಳನ್ನು ಪರಿಷ್ಕರಿಸುವ ಬಗ್ಗೆ.

**ಸ್ವೀಕರಿಸಲಾಗಿದೆ:** 1. ಸಾರ್ವಜನಿಕ ಶಿಕ್ಷಣ ಆಯುಕ್ತರ ಕಛೇರಿಯ ಕಡತ ಸಂಖ್ಯೆ: ವಾಶಿ1 ವಾಶಿ ಬೋ ಶುಲ್ಕ ಇತರೆ ಶುಲ್ಕ ಹೆ ಬಗ್ಗೆ 12/2004–05

**ಪ್ರಸ್ತಾವನೆ:**

ಮೇಲೆ ಉಲ್ಲೇಖಿಸಿದ ಸಾರ್ವಜನಿಕ ಶಿಕ್ಷಣ ಆಯುಕ್ತರ ಕಛೇರಿಯಿಂದ ಸ್ವೀಕರಿಸಲಾದ ಕಡತದಲ್ಲಿ ಕರ್ನಾಟಕ ರಾಜ್ಯ ವಾಣಿಜ್ಯ ವಿದ್ಯಾಶಾಲೆಗಳ ಸಂಘ, ಬೆಂಗಳೂರು, ಇವರ ಬೇಡಿಕೆಯನ್ನು ಪರಿಗಣಿಸಿ, ವಾಣಿಜ್ಯ ಶಿಕ್ಷಣ ಶಾಲೆಗಳ ಮಾಸಿಕ ಮತ್ತು ಇತರೆ ಶುಲ್ಕಗಳು ಹಾಗೂ ಪರೀಕ್ಷೆಗಳಿಗೆ ಸಂಬಂಧಿಸಿದ ಇತರೆ ಶುಲ್ಕಗಳನ್ನು ಪರಿಷ್ಕರಿಸಿ ಹೆಚ್ಚಿಸುವ ಬಗ್ಗೆ ಶಿಫಾರ್ಸಿನೊಂದಿಗೆ ಸರ್ಕಾರದ ಅನುಮೋದನೆಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಬೋಧನೆ ಶುಲ್ಕ ಮತ್ತು ಇತರೆ ಶುಲ್ಕಗಳನ್ನು ಪರಿಷ್ಕರಿಸುವ ವಿವರಗಳು ಈ ಕೆಳಕಂಡಂತಿವೆ.

| ಕ್ರ.ಸಂ | ವಿಷಯ | ದರ್ಜೆ | ಪ್ರಸ್ತುತ ದರ | ಶಾಲಾ ಸಂಘದ ಬೇಡಿಕೆ | ಪರಿಷ್ಕರಿಸಲು ಇಲಾಖೆಯಿಂದ ಶಿಫಾರಸ್ಸು ಮಾಡಿರುವ ದರ |
|---|---|---|---|---|---|
| 1 | ಅರ್ಜಿಶುಲ್ಕ ಎಲ್ಲಾ ವಿಷಯಗಳು | ಎಲ್ಲಾ ದರ್ಜೆ | 10–00 | 20–00 | 20–00 |
| 2 | ದಾಖಲಾತಿ ಶುಲ್ಕ ಎಲ್ಲಾ ವಿಷಯಗಳು | ಎಲ್ಲಾ ದರ್ಜೆ | 10–00 | 20–00 | 20–00 |
| 3 | ವಾಚನಾಲಯ ಶುಲ್ಕ ಎಲ್ಲಾ ವಿಷಯಗಳು | ಎಲ್ಲಾ ದರ್ಜೆ | 10–00 | 20–00 | 20–00 |
| 4 | ದಂಡ ಶುಲ್ಕ | ಎಲ್ಲಾ ದರ್ಜೆ | 2–00<br>11 ರಿಂದ 15ನೇ ತಾರೀಖು<br>ರೂ. 5–00,<br>16 ರಿಂದ 31 | 10–00 | 5–00<br>11 ರಿಂದ 31 ರವರೆಗೆ |
| 5 | ಮಾಸಿಕ ಶುಲ್ಕ ಎಲ್ಲಾ ವಿಷಯಗಳು | ಪ್ರಥಮ<br>ಮಧ್ಯಮ<br>ಪ್ರೌಢ<br>ಪ್ರವೀಣ | 60–00<br>70–00<br>70–00<br>80–00 | 80–00<br>90–00<br>90–00<br>100–00 | 75–00<br>85–00<br>85–00<br>95–00 |
| | | **ಪರೀಕ್ಷೆಗಳಿಗೆ ಸಂಬಂಧಿಸಿದ ಇತರೆ ಶುಲ್ಕಗಳು** | | | |
| 6 | ಮೆಕಾನಿಸಂ ಶುಲ್ಕ ಬೆರಳಚ್ಚು ವಿಷಯಗಳಿಗೆ ಮಾತ್ರ | ಪ್ರಥಮ<br>ಪ್ರೌಢ<br>ಪ್ರವೀಣ | 40–00<br>50–00<br>60–00 | 60–00<br>70–00<br>80–00 | 50–00<br>60–00<br>70–00 |
| 7 | ಬೆರಳಚ್ಚು ಯಂತ್ರದ ಬಾಡಿಗೆ (ಎಲ್ಲಾ ವಿಷಯಗಳಿಗೆ) | ಎಲ್ಲಾ ದರ್ಜೆ | 40–00 | 60–00 | 50–00 |
| 8 | ಪೀಠೋಪಕರಣಗಳ ಬಾಡಿಗೆ (ಬೆರಳಚ್ಚು ಪರೀಕ್ಷೆಗಳಿಗೆ ಮಾತ್ರ) | ಎಲ್ಲಾ ದರ್ಜೆ | 15–00 | 30–00 | 25–00 |
| 9 | ಸಾಗಾಣಿಕೆ ವೆಚ್ಚ (ಬೆರಳಚ್ಚು ಪರೀಕ್ಷೆಯ ಎಲ್ಲಾ ವಿಷಯಗಳಿಗೆ) | ಎಲ್ಲಾ ದರ್ಜೆ | 10–00 | 20–00 | 15–00 |

ಪ್ರಸ್ತಾವನೆಯನ್ನು ಸರ್ಕಾರವು ಪರಿಗಣಿಸಿ, ವಾಣಿಜ್ಯ ಶಾಲೆಗಳಲ್ಲಿನ ಬೋಧನಾ ಶುಲ್ಕ ಮತ್ತು ಇತರೆ ಶುಲ್ಕಗಳನ್ನು ಪುನರ್ ವಿಮರ್ಶಿಸಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 8 ಎಲ್‌ಸಿಇ 2005, ಬೆಂಗಳೂರು, ದಿನಾಂಕ:20ನೇ ಜೂನ್, 2005**

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ವಾಣಿಜ್ಯ ಶಾಲೆಗಳ ಬೋಧನೆ ಮತ್ತು ಇತರೆ ಶುಲ್ಕಗಳನ್ನು ಸಾರ್ವಜನಿಕ ಶಿಕ್ಷಣ ಆಯುಕ್ತರು ಶಿಫಾರ್ಸು ಮಾಡಿ ಸಲ್ಲಿಸಿದಂತೆ ಕೆಳಕಂಡಂತೆ ಪರಿಷ್ಕರಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಆದೇಶಿಸಲಾಗಿದೆ.

ವಾಣಿಜ್ಯ ಶಿಕ್ಷಣ ಶಾಲೆಗಳ ಮಾಸಿಕ ಮತ್ತು ಇತರೆ ಶುಲ್ಕಗಳ ಪರಿಷ್ಕರಿಸಿದ ದರಗಳು

| ಕ್ರ.ಸಂ | ವಿಷಯ | ದರ್ಜೆ | ಪ್ರಸ್ತುತ ದರ (ರೂ.ಗಳಲ್ಲಿ) | ಪರಿಷ್ಕರಿಸಿದ ದರ (ರೂ.ಗಳಲ್ಲಿ) |
|---|---|---|---|---|
| 1 | ಅರ್ಜಿಶುಲ್ಕ ಎಲ್ಲಾ ವಿಷಯಗಳು | ಎಲ್ಲಾ ದರ್ಜೆ | 10–00 | 20–00 |
| 2 | ದಾಖಲಾತಿ ಶುಲ್ಕ ಎಲ್ಲಾ ವಿಷಯ | ಎಲ್ಲಾ ದರ್ಜೆ | 10–00 | 20–00 |
| 3 | ವಾಚನಾಲಯ ಶುಲ್ಕ ಎಲ್ಲಾ ವಿಷಯ | ಎಲ್ಲಾ ದರ್ಜೆ | 10–00 | 20–00 |
| 4 | ದಂಡ ಶುಲ್ಕ | ಎಲ್ಲಾ ದರ್ಜೆ | 2–00<br>11 ರಿಂದ 15ನೇ ತಾರೀಖು ರೂ. 5–00, 16 ರಿಂದ 31 | 5–00<br>(11 ರಿಂದ 31 ರವರೆಗೆ) |
| 5 | ಮಾಸಿಕ ಶುಲ್ಕ ಎಲ್ಲಾ ವಿಷಯಗಳು | ಪ್ರಥಮ<br>ಮಧ್ಯಮ<br>ಪ್ರೌಢ<br>ಪ್ರವೀಣ | 60–00<br>70–00<br>70–00<br>80–00 | 75–00<br>85–00<br>85–00<br>95–00 |
| | ಪರೀಕ್ಷೆಗಳಿಗೆ ಸಂಬಂಧಿಸಿದ ಇತರೆ ಶುಲ್ಕಗಳು | | | |
| 6 | ಮೆಕಾನಿಸಂ ಶುಲ್ಕ ಬೆರಳಚ್ಚು ವಿಷಯಗಳಿಗೆ ಮಾತ್ರ | ಪ್ರಥಮ<br>ಪ್ರೌಢ<br>ಪ್ರವೀಣ | 40–00<br>50–00<br>60–00 | 50–00<br>60–00<br>70–00 |
| 7 | ಬೆರಳಚ್ಚು ಯಂತ್ರದ ಬಾಡಿಗೆ (ಎಲ್ಲಾ ವಿಷಯಗಳಿಗೆ) | ಎಲ್ಲಾ ದರ್ಜೆ | 40–00 | 50–00 |
| 8 | ಪೀಠೋಪಕರಣಗಳ ಬಾಡಿಗೆ (ಬೆರಳಚ್ಚು ಪರೀಕ್ಷೆಗಳಿಗೆ ಮಾತ್ರ) | ಎಲ್ಲಾ ದರ್ಜೆ | 15–00 | 25–00 |
| 9 | ಸಾಗಾಣಿಕೆ ವೆಚ್ಚ (ಬೆರಳಚ್ಚು ಪರೀಕ್ಷೆಯ ಎಲ್ಲಾ ವಿಷಯಗಳಿಗೆ) | ಎಲ್ಲಾ ದರ್ಜೆ | 10–00 | 15–00 |

ದಿನಾಂಕ 10–07–96 ರ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಭಾವಿಸಿ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎನ್. ಸೋಮಶೇಖರ್**

ಪಿ.ಆರ್.927

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

**ವಿಷಯ:** ತಾಂತ್ರಿಕ ಶಿಕ್ಷಣ ಇಲಾಖೆಯ ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು ವತಿಯಿಂದ ಜರುಗಿಸಲ್ಪಡುವ ಪರೀಕ್ಷೆಯ ಉತ್ತರ ಪತ್ರಿಕೆಯ ಪೋಟೋ ಪ್ರತಿ ನೀಡುವ ಹಾಗೂ ಪುನರ್ ಮೌಲ್ಯಮಾಪನ ಮಾಡುವ ಬಗ್ಗೆ.

**ಓದಲಾಗಿದೆ:** 1. ತಾಂತ್ರಿಕ ಶಿಕ್ಷಣ ನಿರ್ದೇಶಕರ ಪತ್ರ ಸಂಖ್ಯೆ: ಬಿಟಿಇ 10 ಇಸಿಎಸ್(1) 98 ದಿನಾಂಕ: 24–07–2003 ಮತ್ತು 17–04–2004.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರಗಳಲ್ಲಿ ವಿದ್ಯಾರ್ಥಿಗಳು ಅವರ ಪಾಲಕರು, ಪೋಷಕರು ತಮ್ಮ ಸಂಶಯ ಪರಿಹಾರಕ್ಕಾಗಿ ಈಗ ಲಭ್ಯವಿರುವ ಅಂಕಗಳ ಮರು ಕೂಡುವಿಕೆಯ ಸೌಲಭ್ಯದ ಮೊರೆಹೋಗಿದ್ದು ಅದರ ಫಲ/ಪರಿಣಾಮದಿಂದ ಕಿಂಚಿತ್ತೂ ಸಮಾಧಾನ ಹೊಂದದೆ ಇಂದಿನ ಪರೀಕ್ಷಾ ಮೌಲ್ಯಮಾಪನ ಪದ್ಧತಿಯಲ್ಲಿಯೇ ನ್ಯೂನ್ಯತೆಗಳಿವೆಯೆಂದು ಮರು ಮೌಲ್ಯಮಾಪನವೇ ಸರಿಯಾದ ಪರಿಹಾರವೆಂದು ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯನ್ನು ಉತ್ತರಪತ್ರಿಕೆಗಳ ಮರು ಮೌಲ್ಯಮಾಪನಕ್ಕಾಗಿ ಮೇಲಿಂದ ಮೇಲೆ ಒತ್ತಾಯಿಸುತ್ತಿದ್ದಾರೆ ಹಾಗೂ ಇತರ ಮಂಡಳಿ / ವಿಶ್ವವಿದ್ಯಾಲಯಗಳಲ್ಲಿ ಜಾರಿಯಲ್ಲಿರುವ ಈ ರೀತಿಯ ಪದ್ಧತಿಯನ್ನು ಇಲ್ಲಿಯೂ ಅಳವಡಿಸಲು ಕೋರಿಕೆ ಸಲ್ಲಿಸುತ್ತಿದ್ದಾರೆ. ಇದೇ ರೀತಿ ಬಹುತೇಕ ಪಾಲಿಟೆಕ್ನಿಕ್‌ಗಳ ಪ್ರಾಚಾರ್ಯರುಗಳೂ ಸಹ ಈ ಪದ್ಧತಿಯ ಅಳವಡಿಕೆ ಬಗ್ಗೆ ಒಲವು ತೋರಿಸುತ್ತಿದ್ದಾರೆ. ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯ 124ನೇ ಸಭೆಯಲ್ಲಿ ಈ ಬಗ್ಗೆ ಚರ್ಚಿಸಿ ಬೇರೆ ಬೇರೆ ಪರೀಕ್ಷಾ ಮಂಡಳಿಗಳು ಅಥವಾ ವಿಶ್ವವಿದ್ಯಾಲಯಗಳಲ್ಲಿ ಇರುವ ಮಾದರಿಯಲ್ಲಿ ತಾಂತ್ರಿಕ ಪರೀಕ್ಷಾ ಮಂಡಳಿಯಲ್ಲಿಯೂ ಮೌಲ್ಯಮಾಪನ ಮಾಡಿರುವ ಉತ್ತರಪತ್ರಿಕೆಗಳ ಪುನರ್ ಮೌಲ್ಯಮಾಪನ ಮಾಡಲು ಕ್ರಮ ಕೈಗೊಳ್ಳಬಹುದೆಂದು ನಿರ್ಣಯಿಸಲಾಗಿರುತ್ತದೆ. ಹಾಲಿ ರಾಜ್ಯದಲ್ಲಿ ಪದವಿ ಪೂರ್ವ ಶಿಕ್ಷಣ ಮಂಡಳಿಯು ಪಿ.ಯು.ಸಿ. ದ್ವಿತೀಯ ವರ್ಷದ ವಿದ್ಯಾರ್ಥಿಗಳಿಗೆ ಮೌಲ್ಯಮಾಪನ ಮಾಡಿದ ಉತ್ತರಪತ್ರಿಕೆಗಳ ಪುನರ್ ಮೌಲ್ಯಮಾಪನ ಮಾಡುವ ಪದ್ಧತಿಯನ್ನು ಅಳವಡಿಸಿರುತ್ತದೆ. ಬೆಂಗಳೂರು ವಿಶ್ವವಿದ್ಯಾಲಯವು ತನ್ನ ಪದವಿ ಕೋರ್ಸು ಮಾಡುತ್ತಿರುವ ವಿದ್ಯಾರ್ಥಿಗಳಿಗೆ ಈ ಪದ್ಧತಿಯನ್ನು ಜಾರಿಗೆ ತಂದಿರುವುದಾಗಿ ತಿಳಿದುಬಂದಿರುತ್ತದೆಯೆಂದು ತಿಳಿಸುತ್ತಾ ತಾಂತ್ರಿಕ ಶಿಕ್ಷಣ ಇಲಾಖೆಯಲ್ಲಿಯೂ ಕೋರಿಕೆ ಬಂದಲ್ಲಿ ಉತ್ತರ ಪತ್ರಿಕೆಗಳ ಪುನರ್ ಮೌಲ್ಯಮಾಪನ ಮಾಡುವ ಮತ್ತು ಕೋರಿದ ಅಭ್ಯರ್ಥಿಗಳಿಗೆ ಅವರ ಉತ್ತರ ಪತ್ರಿಕೆಗಳ ಫೋಟೋ ಕಾಪಿ ಕೊಡುವ ಪದ್ಧತಿಯನ್ನು ಜಾರಿಗೆ ತರಲು, ಮರು ಮೌಲ್ಯಮಾಪನದ ದರಗಳು / ಫೋಟೋ ಪ್ರತಿಗೆ ನೀಡುವ ದರಗಳು ಇತ್ಯಾದಿಗಳನ್ನು ಪ್ರಸ್ತುತ ಇರುವ ಮೌಲ್ಯಮಾಪನದ ಕಾರ್ಯಕ್ಕೆ ನಿಗದಿಪಡಿಸಿರುವ ದರಗಳನ್ನು ತುಲನೆ ಮಾಡಿ ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿನ ದರಗಳೊಂದಿಗೆ ತುಲನೆ ಮಾಡಿ ಈ ಕೆಳಕಂಡಂತೆ ನಿಗದಿ ಪಡಿಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ.

| | |
|---|---|
| 1. ತಾಂತ್ರಿಕ ಪರೀಕ್ಷಾ ಮಂಡಳಿ ವತಿಯಿಂದ ಪ್ರತಿ ಉತ್ತರ ಪತ್ರಿಕೆಯ ಜೆರಾಕ್ಸ್ ಕಾಪಿ ನೀಡಲು. | ರೂ.250–00 |

| | |
|---|---|
| 2. ತಾಂತ್ರಿಕ ಪರೀಕ್ಷಾ ಮಂಡಳಿ ವತಿಯಿಂದ ಪ್ರತಿ ಉತ್ತರ ಪತ್ರಿಕೆಯ ಮರುಮೌಲ್ಯಮಾಪನ ಮಾಡಲು. | ರೂ.550–00 |
| ತಾಂತ್ರಿಕ ಪರೀಕ್ಷಾ ಮಂಡಳಿಯಲ್ಲಿ ಉತ್ತರ ಪತ್ರಿಕೆಗಳ ಜೆರಾಕ್ಸ್ ಕಾಪಿ ತೆಗೆದುಕೊಡಲು ಕೊಟೇಷನ್ ಕರೆಯುವ ಮೂಲಕ ದರ ನಿಗದಿಪಡಿಸಲು ಅಥವಾ ಖಾಸಗಿ ವ್ಯಕ್ತಿಗಳು : ಕಂಪನಿಗಳಿಂದ ಸಹಾಯ ಪಡೆದು ಪ್ರತಿ ಪುಟದ ಎ–4 ಅಳತೆಯ ಒಂದು ಪ್ರತಿಗೆ ರೂ.80ಪೈಸೆ ದರ ನಿಗದಿಪಡಿಸಲು. | |

4. ಮೌಲ್ಯಮಾಪನಗೊಂಡ ಉತ್ತರ ಪತ್ರಿಕೆಗಳ ಜೆರಾಕ್ಸ್ ಪ್ರತಿ ವಿವಿಧ ಕಾರ್ಯಗಳನ್ನು ನಿರ್ವಹಿಸಿದ ಅಧಿಕಾರಿಗಳು ಮತ್ತು ಸಿಬ್ಬಂದಿಗೆ ಸಂಭಾವನೆ.

| ಎ) ಮರು ಮೌಲ್ಯಮಾಪಕರಿಗೆ ಸಂಭಾವನೆ: | ತಾಂತ್ರಿಕ ಪರೀಕ್ಷಾ ಮಂಡಳಿ ನೀಡಲು ಪ್ರಸ್ತಾಪಿಸಿರುವ ದರ |
|---|---|
| 1. ಒಂದು ಉತ್ತರ ಪತ್ರಿಕೆಗೆ | ರೂ.12–50/– |
| 2. 10ಕ್ಕಿಂತ ಕಡಿಮೆ ಉತ್ತರ ಪತ್ರಿಕೆಗಳ ಮೌಲ್ಯಮಾಪನ ಮಾಡಿದಲ್ಲಿ | ಕನಿಷ್ಟ ರೂ.100–00 |
| 3. 10ಕ್ಕಿಂತ ಹೆಚ್ಚಿನ ಉತ್ತರ ಪತ್ರಿಕೆಗಳ ಮೌಲ್ಯಮಾಪನ ಮಾಡಿದಲ್ಲಿ | ಕನಿಷ್ಟ ರೂ.200–00 |
| 4. ಟಿ.ಎ. ಮತ್ತು ಡಿ.ಎ. | **ದಿನಭತ್ಯೆ:** ಡಿ.ಎ ದಿನ ಒಂದಕ್ಕೆ ರೂ.200/–<br>**ಸಾರಿಗೆ ಭತ್ಯೆ:** ಸ್ಥಳೀಯರಿಗೆ ರೂ.50/–<br>ಹೊರಗಿನವರಿಗೆ ಪ್ರಥಮ ದರ್ಜೆ ರೈಲು ಪ್ರಮಾಣ |
| ಬಿ. ಉತ್ತರ ಪತ್ರಿಕೆಗಳ ಜೆರಾಕ್ಸ್ ಕಾಪಿ ನೀಡುವ ಮತ್ತು ಮರು ಮೌಲ್ಯಮಾಪನ ಕೆಲಸಗಳನ್ನು ನಿರ್ವಹಿಸುವ ಅಧಿಕಾರಿಗಳು ಹಾಗೂ ಸಿಬ್ಬಂದಿಗೆ ಸಂಭಾವನೆ | ರೂ.25–00 ಪ್ರತಿ ಉತ್ತರ ಪತ್ರಿಕೆ ಒಂದಕ್ಕೆ |

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 330 ಟಿಪಿಇ 2004, ಬೆಂಗಳೂರು ದಿನಾಂಕ:28ನೇ ಜೂನ್, 2005**

ಪ್ರಸ್ತಾವನೆಯಲಿ ವಿವರಿಸಿರುವ ಸಂದರ್ಭಗಳ ಹಿನ್ನೆಲೆಯಲ್ಲಿ ತಾಂತ್ರಿಕ ಶಿಕ್ಷಣ ಇಲಾಖೆಯ ತಾಂತ್ರಿಕ ಶಿಕ್ಷಣ ಪರೀಕ್ಷಾ ಮಂಡಳಿಯಿಂದ ಜರುಗಿಸಲ್ಪಡುವ ಡಿಪ್ಲೊಮಾ ಪರೀಕ್ಷೆಯ ಮೌಲ್ಯಮಾಪನಗೊಂಡ ಉತ್ತರ ಪತ್ರಿಕೆಗಳ ಜೆರಾಕ್ಸ್ ಪ್ರತಿ (ಪೋಟೋ ಪ್ರತಿ) ನೀಡುವ ಹಾಗೂ ಪುನರ್ ಮೌಲ್ಯಮಾಪನ ಮಾಡುವ ಪದ್ಧತಿಯನ್ನು ಜಾರಿಗೆ ತರಲು ಆದೇಶಿಸಲಾಗಿದೆ. ಇದಕ್ಕೆ ಸಂಬಂಧಿಸಿದಂತೆ ನಿಗದಿಪಡಿಸಬಹುದಾದ ಶುಲ್ಕಗಳು ಮತ್ತು ಈ ಕಾರ್ಯಗಳಲ್ಲಿ ತೊಡಗುವ ಮತ್ತು ಮೇಲ್ವಿಚಾರಕ ಸಿಬ್ಬಂದಿಗಳಿಗೆ ನೀಡಬೇಕಾದ ಶುಲ್ಕ ಈ ಕೆಳಕಂಡಂತಿರುತ್ತದೆ.

| | |
|---|---|
| 1. ಪ್ರತಿ ಉತ್ತರ ಪತ್ರಿಕೆಯ ಜೆರಾಕ್ಸ್ ಕಾಪಿಗೆ ನಿಗದಿಪಡಿಸಿರುವ ದರ | ರೂ.250–00 |
| 2. ಪ್ರತಿ ಉತ್ತರ ಪತ್ರಿಕೆಯ ಮರುಮೌಲ್ಯಮಾಪನ ಮಾಡುವ ಕಾರ್ಯಕ್ಕೆ ನಿಗದಿಪಡಿಸಿರುವ ದರ | ರೂ.550–00 |
| ಉತ್ತರ ಪತ್ರಿಕೆಗಳ ಜೆರಾಕ್ಸ್ ಕಾಪಿ ತೆಗೆದುಕೊಡಲು ಕೊಟೇಷನ್ ಕರೆಯುವ ಮೂಲಕ ಅಥವಾ ಖಾಸಗಿ ವ್ಯಕ್ತಿಗಳು : ಕಂಪನಿಗಳಿಂದ ಸಹಾಯ ಪಡೆದು ಪ್ರತಿ ಪುಟದ ಎ–4 ಅಳತೆಯ ಒಂದು ಪ್ರತಿಗೆ ರೂ.80ಪೈಸೆ ದರ ನಿಗದಿಪಡಿಸಲು ಸೂಚಿಸಲಾಗಿದೆ. | |

4. ಮೌಲ್ಯಮಾಪನಗೊಂಡ ಉತ್ತರ ಪತ್ರಿಕೆಗಳ ಜೆರಾಕ್ಸ್ ಪ್ರತಿ ವಿವಿಧ ಕಾರ್ಯಗಳನ್ನು ನಿರ್ವಹಿಸಿದ ಅಧಿಕಾರಿಗಳು ಮತ್ತು ಸಿಬ್ಬಂದಿಗೆ ಸಂಭಾವನೆ.

| ಎ) ಮರು ಮೌಲ್ಯಮಾಪಕರಿಗೆ ಸಂಭಾವನೆ: | ತಾಂತ್ರಿಕ ಪರೀಕ್ಷಾ ಮಂಡಳಿ ನೀಡಲು ಪ್ರಸ್ತಾಪಿಸಿರುವ ದರ |
|---|---|
| 1. ಒಂದು ಉತ್ತರ ಪತ್ರಿಕೆಗೆ | ರೂ.12–50/– |
| 2. 10ಕ್ಕಿಂತ ಕಡಿಮೆ ಉತ್ತರ ಪತ್ರಿಕೆಗಳ ಮೌಲ್ಯಮಾಪನ ಮಾಡಿದಲ್ಲಿ | **ಕನಿಷ್ಟ ರೂ.100–00** |
| 3. 10ಕ್ಕಿಂತ ಹೆಚ್ಚಿನ ಉತ್ತರ ಪತ್ರಿಕೆಗಳ ಮೌಲ್ಯಮಾಪನ ಮಾಡಿದಲ್ಲಿ | ಕನಿಷ್ಟ ರೂ.200–00 |
| 4. ಟಿ.ಎ. ಮತ್ತು ಡಿ.ಎ. | **ದಿನಭತ್ಯೆ:** ಡಿ.ಎ ದಿನ ಒಂದಕ್ಕೆ ರೂ.200/–<br>**ಸಾರಿಗೆ ಭತ್ಯೆ:** ಸ್ಥಳೀಯರಿಗೆ ರೂ.50/–ಹೊರಗಿನವರಿಗೆ ಪ್ರಥಮ ದರ್ಜೆ ರೈಲು ಪ್ರಯಾಣ |
| ಬಿ. ಉತ್ತರ ಪತ್ರಿಕೆಗಳ ಮರುಮೌಲ್ಯಮಾಪನ ಕೆಲಸಗಳನ್ನು ನಿರ್ವಹಿಸುವ ಅಧಿಕಾರಿಗಳು ಹಾಗೂ ಸಿಬ್ಬಂದಿಗೆ ಸಂಭಾವನೆ | ರೂ.25–00 ಪ್ರತಿ ಉತ್ತರ ಪತ್ರಿಕೆ ಒಂದಕ್ಕೆ |

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಎಫ್‌ಡಿ 549 ವೆಚ್ಚ–8 :2004 ದಿನಾಂಕ:13–08–2004ರಲ್ಲಿನ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ವೇಣುಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

ಪಿ.ಆರ್.928

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** ಶ್ರಿ ಕೆ.ಟಿ.ತಿಮ್ಮಪ್ಪ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಶಿವಮೊಗ್ಗ ಇವರ ಮೇಲಿನ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ವಿಚಾರಣಾಧಿಕಾರಿಗಳ ನೇಮಕದ ಬಗ್ಗೆ - ಆದೇಶ.

**ಓದಲಾಗಿದೆ:**
1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿ.ಪಂ.,ಶಿವಮೊಗ್ಗ ಇವರ ಪತ್ರ ಸಂ: ಜಿಪಂಶಿ:ಸಿಬ್ಬಂದಿ (3) :ಇಂ:ವಿವ:16: 04-05, ದಿ:6-7-04.
2. ಆದೇಶ ಸಂ:ಗ್ರಾಅಪ:43:ಜಿಪಅ:04 ದಿ:11-1-2005.
3. ಕಾರಣ ಕೇಳುವ ನೋಟೀಸ್‌ನ ಸಂ:ಗ್ರಾಅಪ 143 ಜಿಪಅ 04 ದಿ:19-1-2005.
4. ಆಪಾದಿತರ ಲಿಖಿತ ಹೇಳಿಕೆ ದಿ:3-2-2005.
5. ಆದೇಶ ಸಂ:ಗ್ರಾಅಪ:43:ಜಿಪಅ:04 ದಿ:10-3-2005.

**ಪ್ರಸ್ತಾವನೆ:**

ಶ್ರೀ ಕೆ.ಟಿ.ತಿಮ್ಮಪ್ಪ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಶಿವಮೊಗ್ಗ ಇವರು ದಿನಾಂಕ 4-6-2004 ರಂದು ನಡೆದ ಶಿವಮೊಗ್ಗ ತಾಲ್ಲೂಕು ಪಂಚಾಯತ್‌ನ ಸಾಮಾನ್ಯ ಸಭೆಗೆ ಇವರು ಗೈರು ಹಾಜರಾಗುತ್ತಿದ್ದು, ಇದರಿಂದ ತಾಲ್ಲೂಕಿಗೆ ಸಂಬಂಧಿಸಿದ ವಿವಿಧ ಯೋಜನೆಗಳ ಕ್ರಿಯಾ ಯೋಜನೆಗಳಡಿ ಅನುಮೋದನೆಯಾದ ರಸ್ತೆ ಕುಡಿಯುವ ನೀರಿನ ಮತ್ತು ಮತ್ತಿತರ ಕಾಮಗಾರಿಗಳ ಬಗ್ಗೆ ಸಭೆಯಲ್ಲಿ ಜನಪ್ರತಿನಿಧಿಗಳಿಗೆ ಸರಿಯಾದ ಮಾಹಿತಿ ನೀಡದಿರುವಂತಾಗಿ, ಇವರು ತಾಲ್ಲೂಕು ಪಂಚಾಯತ್‌ನ ಪ್ರತಿ ಸಭೆಗಳಿಗೂ ಕೂಡ ಗೈರುಹಾಜರಾಗುತ್ತಿರುವ ವಿಷಯವು ಸಭೆಗಳಲ್ಲಿ ಚರ್ಚೆಯಾಗಿ, ಸದರಿಯವರ ವಿರುದ್ಧ ಸೂಕ್ತ ಕ್ರಮ ಕೈಗೊಳ್ಳಲು ಸಭೆಯ ನಡವಳಿಯ ತೀರ್ಮಾನದ ಪ್ರಕಾರ ಅಗತ್ಯ ಕ್ರಮ ಕೈಗೊಳ್ಳುವಂತೆ ಶಿವಮೊಗ್ಗ ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಾಹಕ ಅಧಿಕಾರಿಯವರು ಸಲ್ಲಿಸಿದ್ದ ವರದಿಯ ಮೇಲೆ ಸದರಿಯವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವಂತೆ ಶಿವಮೊಗ್ಗ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರು ಮೇಲೆ ಓದಲಾದ ಕ್ರಮ ಸಂ.(1)ರ ಪತ್ರದಲ್ಲಿ ಸರ್ಕಾರಕ್ಕೆ ವರದಿ ಸಲ್ಲಿಸಿದ್ದರು.

ಈ ಸಂಬಂಧ ಸರ್ಕಾರವು ಪರಿಶೀಲಿಸಿ, ಮೇಲೆ ಓದಲಾದ ಕ್ರಮ ಸಂ.(2)ರ ಆದೇಶದ ಪ್ರಕಾರ ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು, ಇವರ ಸೇವೆಯನ್ನು ಅಮಾನತ್ತುಗೊಳಿಸಲಾಗಿತ್ತು.

ತದನಂತರ ಇವರಿಗೆ ಅನುಬಂಧ-1 ರಿಂದ 4 ರಲ್ಲಿ ದೋಷಾರೋಪಣೆಯೊಡನೆ ಕಾರಣ ಕೇಳುವ ನೋಟೀಸಿನೊಂದಿಗೆ ಮೇಲೆ ಓದಲಾದ ಕ್ರಮ ಸಂ (3)ರ ಪ್ರಕಾರ ಜಾರಿ ಮಾಡಲಾಗಿ, ಸದರಿಯರು ಲಿಖಿತ ಉತ್ತರ ನೀಡಿ ತನ್ನ ಮೇಲಿನ ಆರೋಪವನ್ನು ನಿರಾಕರಿಸಿ ಮೇಲೆ ಓದಲಾದ ಕ್ರಮ ಸಂ.(4)ರ ಪತ್ರದಲ್ಲಿ ಲಿಖಿತ ಹೇಳಿಕೆ ಸಲ್ಲಿಸಿದ್ದರು.

ಆದ್ದರಿಂದ ಶ್ರೀ ಕೆ.ಟಿ.ತಿಮ್ಮಪ್ಪ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಶಿವಮೊಗ್ಗ ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಇವರ ಸೇವೆಯ ಅಮಾನತ್ತನ್ನು ತೆರವುಗೊಳಿಸಿ, ಸೇವೆಯಲ್ಲಿ ಪುನರ್ ಸ್ಥಾಪಿಸಿ, ಇವರನ್ನು ಅವರ ಮಾತೃ ಇಲಾಖೆಯಾದ ಲೋಕೋಪಯೋಗಿ ಇಲಾಖೆಗೆ ಹಿಂದಿರುಗಿಸಿ ಮೇಲೆ ಓದಲಾದ ಕ್ರ.ಸಂ.(5)ರಲ್ಲಿ ಆದೇಶಿಸಿದೆ. ಸದರಿಯವರು ತಮ್ಮ ಮೇಲಿನ ದೋಷಾರೋಪಣೆಗಳನ್ನು ನಿರಾಕರಿಸುವುದರಿಂದ ಸರ್ಕಾರವು ಈ ಪ್ರಕರಣದ ಸತ್ಯಾಸತ್ಯತೆಯನ್ನು ಅರಿಯುವ ಸಲುವಾಗಿ ಪ್ರಕರಣದಲ್ಲಿ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 143 ಜಿಪಅ 04, ಬೆಂಗಳೂರು, ದಿನಾಂಕ: 20ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕಸಸೇ (ವನಿಮೇ) ನಿಯಮ 1957ರ ನಿಯಮ 11ರ ವಿಧಿವಿಧಾನಗಳನ್ನು ಅನುಸರಿಸಿ, ಶ್ರಿ ಕೆ.ಟಿ.ತಿಮ್ಮಪ್ಪ, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಶಿವಮೊಗ್ಗ, ಇವರ ಮೇಲಿನ ಆಪಾದನೆಗಳ ಬಗ್ಗೆ ವಿವರವಾದ ವಿಚಾರಣೆ ನಡೆಸಲು ಉಪಕಾರ್ಯದರ್ಶಿ (ಆಡಳಿತ), ಜಿ.ಪಂ., ಶಿವಮೊಗ್ಗ ಇವರನ್ನು ಅದೇ ನಿಯಮಗಳ ನಿಯಮ 11(2)ರ ರೀತ್ಯ ವಿಚಾರಣಾಧಿಕಾರಿಯನ್ನಾಗಿ ಮತ್ತು ನಿಯಮ 11(5)ರ ರೀತ್ಯ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಶಿವಮೊಗ್ಗ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ವಿಚಾರಣಾಧಿಕಾರಿಗಳು ಪ್ರಕರಣದ ವಿಚಾರಣೆಯನ್ನು ಮೂರು ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವಂತೆ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಸಿ. ಸುಂದರ**
ಸರ್ಕಾರದ ಅಧೀನ ಕಾರ್ಯದರ್ಶಿ, (ಸೇವೆಗಳು–ಎ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

ಪಿ.ಆರ್.925

## ಲೋಕೋಪಯೋಗಿ ಸಚಿವಾಲಯ

**ವಿಷಯ:** ರಫ್ತು ಅಭಿವೃದ್ಧಿ ಮತ್ತು ಕೈಗಾರಿಕಾ ವಲಯಗಳ ಸಂಪರ್ಕ ಕಲ್ಪಿಸುವ ರಸ್ತೆಯಾದ ಹಾರೋಹಳ್ಳಿಯಿಂದ ತಟ್ಟೆಕೆರೆ ಮಾರ್ಗವಾಗಿ ಜಿಗಣಿಗೆ ಸೇರುವ ರಸ್ತೆಯ ಅಭಿವೃದ್ಧಿ.

**ಉಲ್ಲೇಖ:** 1. ದಿನಾಂಕ: 20.01.2005 ರಂದು ನಡೆದ 5ನೇ ರಾಜ್ಯ ಮಟ್ಟದ ಅಸೈಡ್ (Aside) ಯೋಜನೆಯಡಿಯ ರಫ್ತು ಅಭಿವೃದ್ಧಿ ಸಮಿತಿಯ ಸಭೆಯ ನಡವಳಿ.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯಧಾನಿ ಬೆಂಗಳೂರು ನಗರವು ಅತಿ ವೇಗವಾಗಿ ಬೆಳೆಯುತ್ತಿರುವ ಮಹಾನಗರವಾಗಿರುತ್ತದೆ. ಮೊದಲಿನಿಂದಲೂ ಬೆಂಗಳೂರು ನಗರವು ಶೈಕ್ಷಣಿಕ ಮತ್ತು ವಿಜ್ಞಾನ ಕ್ಷೇತ್ರಗಳಲ್ಲಿ ಮುಂದಿರುತ್ತದೆ. ಅಲ್ಲದೆ ದೇಶದ ರಕ್ಷಣಾ ಇಲಾಖೆಯ ಅನೇಕ ಕಾರ್ಖಾನೆಗಳು ಮತ್ತು ಸಂಶೋಧನಾ ಸಂಸ್ಥೆಗಳು ಬೆಂಗಳೂರಿನಲ್ಲಿ ಇರುತ್ತವೆ. ಇತ್ತೀಚೆಗೆ ಐಟಿ ಮತ್ತು ಬಿಟಿ ಉದ್ಯಮಗಳ ಬೆಳವಣಿಗೆಯಿಂದ ಬೆಂಗಳೂರಿಗೆ ಪ್ರಪಂಚದಲ್ಲಿ ವಿಶಿಷ್ಟವಾದ ಕೀರ್ತಿ ಇರುತ್ತದೆ. ಈ ಬೆಳವಣಿಗೆಯಿಂದ ಬೆಂಗಳೂರು ನಗರದಲ್ಲಿ ಉದ್ಯೋಗ ಅವಕಾಶಗಳು ಹೆಚ್ಚಾಗಿದ್ದು, ಜನಸಂಖ್ಯೆ ಮತ್ತು ವಾಹನ ಸಾಂದ್ರತೆ ಹೆಚ್ಚಾಗಿರುತ್ತದೆ. ಆದ್ದರಿಂದ ಹೊರ ವಲಯದ ರಸ್ತೆಗಳನ್ನು ಶೀಘ್ರವಾಗಿ ಅಭಿವೃದ್ಧಿಗೊಳಿಸಬೇಕಾಗಿರುತ್ತದೆ.

ಹಾರೋಹಳ್ಳಿ-ಜಿಗಣಿ ರಸ್ತೆಯ ಅಭಿವೃದ್ಧಿಗೆ ಅಸೈಡ್ ಯೋಜನೆಯಡಿ 15 ಕೋಟಿ ರೂ.ಗಳಿಗೆ ಮಂಜೂರಾತಿಯನ್ನು ಪಡೆಯಲಾಗಿದೆ. ಇದರಲ್ಲಿ ಅಸೈಡ್‌ನ ವತಿಯಿಂದ 14 ಕೋಟಿ ರೂ.ಗಳನ್ನು ಮತ್ತು ಇತರೆ ಮೂಲಗಳಿಂದ 1 ಕೋಟಿ ರೂ.ಗಳನ್ನು ಭರಿಸಬೇಕಾಗಿರುತ್ತದೆ. ಸದರಿ ಯೋಜನೆಯನ್ನು ಮಂಜೂರು ಮಾಡುವಾಗ ಇದನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಅಥವಾ ಲೋಕೋಪಯೋಗಿ ಇಲಾಖೆ ಪೈಕಿ ಯಾವುದು ಅನುಷ್ಠಾನಗೊಳಿಸುವುದು ಎಂಬುದು ಸರ್ಕಾರದ ಮಟ್ಟದಲ್ಲಿ ನಿರ್ಧರಿಸಬೇಕೆಂದು ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆಯವರು ತಿಳಿಸಿರುತ್ತಾರೆ. ಅದರಂತೆ ಮಾನ್ಯ ಲೋಕೋಪಯೋಗಿ ಹಾಗೂ ಇಂಧನ ಸಚಿವರು ಈ ಕಾಮಗಾರಿಯನ್ನು ಲೋಕೋಪಯೋಗಿ ಇಲಾಖೆಯವರೇ ಅನುಷ್ಠಾನಗೊಳಿಸಬೇಕೆಂದು ಸೂಚಿಸಿರುತ್ತಾರೆ.

ಹಾರೋಹಳ್ಳಿ-ಜಿಗಣಿ ರಸ್ತೆಯು 26.60 ಕಿ.ಮೀ. ಉದ್ದವಿದ್ದು, ಬೆಂಗಳೂರು ನಗರದಿಂದ ರಾಷ್ಟ್ರೀಯ ಹೆದ್ದಾರಿ-209ರಲ್ಲಿ ಸಂಚರಿಸುವ ವಾಹನಗಳು ಹಾರೋಹಳ್ಳಿಯ ಮುಖಾಂತರ ಹಾಯ್ದು ತಮಿಳುನಾಡು ಸೇರುತ್ತದೆ. ಹಾರೋಹಳ್ಳಿಯಿಂದ ರಾಷ್ಟ್ರೀಯ ಹೆದ್ದಾರಿ-7ರ ಮೂಲಕ ತಮಿಳುನಾಡಿನ ಹೊಸೂರು, ಸೇಲಂ ಅನ್ನು ಸೇರುವ ವಾಹನಗಳು ಈ ರಸ್ತೆಯ ಮುಖಾಂತರ ಸಂಚರಿಸುತ್ತದೆ. ಈ ರಸ್ತೆಯು ಪ್ರಮುಖ ಪ್ರವಾಸಿ ತಾಣಗಳಾದ ಮುತ್ಯಾಲಮಡುವು, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನಕ್ಕೆ ಸಂಪರ್ಕ ಕಲ್ಪಿಸುವ ರಸ್ತೆಯಾಗಿರುತ್ತದೆ. ಅಲ್ಲದೇ ಗ್ರಾನೈಟ್ ಉದ್ಯಮದ ಕೈಗಾರಿಕಾ ವಸಹಾತುಗಳಾದ ಜಿಗಣಿ ಮತ್ತು ಹಾರೋಹಳ್ಳಿಗೆ ನೇರ ಸಂಪರ್ಕವನ್ನು ಒದಗಿಸುತ್ತದೆ.

ಕೈಗಾರಿಕೆಗಳ ಅಭಿವೃದ್ಧಿ ಇಲಾಖೆಯ ಆಯುಕ್ತರು ಮತ್ತು ಕೈಗಾರಿಕೆಗಳ ಮತ್ತು ವಾಣಿಜ್ಯ ಇಲಾಖೆಯ ನಿರ್ದೇಶಕರು, ಬೆಂಗಳೂರು ರವರು ಈ ರಸ್ತೆಯನ್ನು ಅಸೈಡ್ ಯೋಜನೆಯಡಿಯಲ್ಲಿ ಬಲಪಡಿಸಿ ಅಭಿವೃದ್ಧಿಪಡಿಸಲು ಸೂಚನೆಗಳನ್ನು ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕರ್ನಾಟಕ ಸರ್ಕಾರದ ಮಾನ್ಯ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ದಿನಾಂಕ: 20.01.2005 ರಂದು ನಡೆದ ಉನ್ನತಮಟ್ಟದ ಸಭೆಯಲ್ಲಿ ಅನುಮೋದಿಸಲಾಗಿದೆ.

ಈ ರಸ್ತೆಯನ್ನು ಲೋಕೋಪಯೋಗಿ ಇಲಾಖೆ ವತಿಯಿಂದ ಬಲಪಡಿಸಿ ಅಭಿವೃದ್ಧಿ ಪಡಿಸುವುದು ತೀರಾ ಅವಶ್ಯವಿರುವುದರಿಂದ ಮುಖ್ಯ ಇಂಜಿನಿಯರ್, ಲೋಕೋಪಯೋಗಿ ಇಲಾಖೆ, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ರವರು ಈ ಕೆಳಗಿನಂತೆ ಮೂರು ಪ್ಯಾಕೇಜುಗಳಲ್ಲಿ ಅಂದಾಜು ಪಟ್ಟಿಗಳನ್ನು ಸಲ್ಲಿಸಿರುತ್ತಾರೆ.

**ಅ. ಪ್ಯಾಕೇಜ್-1**

ಕನಕಪುರ ತಾಲ್ಲೂಕು, ಹಾರೋಹಳ್ಳಿಯಿಂದ ಜಿಗಣಿ ಸೇರುವ ರಸ್ತೆಯ ಸರಪಳಿ 0.00 ಕಿ.ಮೀ. ರಿಂದ 9.00 ಕಿ.ಮೀ. ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ - ರೂ.5 ಕೋಟಿ

**ಆ. ಪ್ಯಾಕೇಜ್-2**

ಕನಕಪುರ ತಾಲ್ಲೂಕು, ಹಾರೋಹಳ್ಳಿಯಿಂದ ಜಿಗಣಿ ಸೇರುವ ರಸ್ತೆಯ ಸರಪಳಿ 9.00 ಕಿ.ಮೀ. ರಿಂದ 18.00 ಕಿ.ಮೀ. ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ - ರೂ.5 ಕೋಟಿ

**ಇ. ಪ್ಯಾಕೇಜ್-3**

ಆನೇಕಲ್ ತಾಲ್ಲೂಕು, ಹಾರೋಹಳ್ಳಿಯಿಂದ ಜಿಗಣಿ ಸೇರುವ ರಸ್ತೆಯ ಸರಪಳಿ 18.00 ಕಿ.ಮೀ. ರಿಂದ 26.60 ಕಿ.ಮೀ. ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ - ರೂ.5 ಕೋಟಿ

**ಒಟ್ಟು ಮೊತ್ತ** - ರೂ.15 ಕೋಟಿ

ಇದರಂತೆ ಈ ಕಾಮಗಾರಿಯ ಒಟ್ಟು ಮೊತ್ತವು ರೂ.15 ಕೋಟಿಗಳಾಗಿರುತ್ತದೆ. ಇದರಲ್ಲಿ ಅಸೈಡ್‌ರವರು 14 ಕೋಟಿ ರೂ.ಗಳನ್ನು ಹಾಗೂ ಉಳಿದ 1 ಕೋಟಿ ರೂ.ಗಳನ್ನು ಖಾಸಗಿ ಉದ್ಯಮದವರು ಭರಿಸುವರು. ಈ ರಸ್ತೆಯ ಅಭಿವೃದ್ಧಿಯಿಂದ ಈ ಭಾಗದಲ್ಲಿ ವಾಹನ ಸಂಚಾರವು ಹೆಚ್ಚಾಗಲಿದ್ದು, ಸುತ್ತಮುತ್ತಲಿನ ಪ್ರದೇಶದಲ್ಲಿ ಆರ್ಥಿಕ ಪ್ರಗತಿಯ ಚಟುವಟಿಕೆಗಳು ಹೆಚ್ಚಾಗುತ್ತವೆ. ಇದರಿಂದಾಗಿ ರಾಜ್ಯದ ಆದಾಯವು ಸಹ ಹೆಚ್ಚಲಿದ್ದು ಆರ್ಥಿಕ ಸ್ಥಿತಿ ಸುಧಾರಣೆಗೆ ಸಹಕಾರಿಯಾಗಲಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 20 ಇಎಪಿ 2005, ಬೆಂಗಳೂರು, ದಿನಾಂಕ: 21ನೇ ಜೂನ್, 2005**

ಮೇಲ್ಕಾಣಿಸಿದ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಗಿನಂತೆ ಸರ್ಕಾರದ ಆದೇಶವನ್ನು ಹೊರಡಿಸಲಾಗಿದೆ.

1. "ರಫ್ತು ಅಭಿವೃದ್ಧಿ ಮತ್ತು ಕೈಗಾರಿಕಾ ಸಂಪರ್ಕ ರಸ್ತೆಯಾದ ಹಾರೋಹಳ್ಳಿಯಿಂದ ತಟ್ಟೆಕೆರೆ ಮಾರ್ಗವಾಗಿ ಜಿಗಣಿ ಸೇರುವ ರೂ.15 ಕೋಟಿಗಳ ಅಸೈಡ್ ಯೋಜನೆಯಡಿಯ ರಸ್ತೆಯ ಅಭಿವೃದ್ಧಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.
2. ಈ ಕಾಮಗಾರಿಯನ್ನು ಲೋಕೋಪಯೋಗಿ ಇಲಾಖೆಯವರು ಅನುಷ್ಠಾನಗೊಳಿಸಲು ಅನುಮೋದನೆ ನೀಡಲಾಗಿದೆ.
3. ಸದರಿ ಕಾಮಗಾರಿಗೆ ಅಗತ್ಯವಾದ ಮೊತ್ತವನ್ನು ಹಣ ಭರವಸೆ ಪತ್ರದ ಮೂಲಕ ಆರ್ಥಿಕ ಇಲಾಖೆಯಿಂದ ಪಡೆಯಲು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯು ರೂ.15.00 ಕೋಟಿಗಳನ್ನು ಆರ್ಥಿಕ ಇಲಾಖೆಗೆ ನೀಡುವ ಮೊತ್ತದಲ್ಲಿ ವೆಚ್ಚವನ್ನು ಭರಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಪಿಡಬ್ಲ್ಯೂಡಿ 412 ಎಫ್‌ಸಿ-1/ 2005 ದಿನಾಂಕ: 18.05.2005ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎ. ವಿಜಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಇಎಪಿ).

ಪಿ.ಆರ್.938

**REVENUE SECRETARIAT**

**Sub:** Rehabilitation and Resettlement Package for the Project Displaced Families of Kudremukh National Park.

**G.O. No. RD 26 REH 2003, Bangalore, Dated: 18th April, 2005**

**Read:** Report of the Deputy Commissioners of Dakshina Kannada, Udupi and Chickmagalore Districts and Deputy conservator of Forest, Kudremukh National Park, regarding Rehabilitation and Resettlement of the project displaced families from Kudremukh National Park.

**Preamble:**

As per the reports of the Deputy Commissioners and Deputy Conservator of Forest to the Government for the rehabilitation and resettlement of Project Displaced Families (PDF) of kudremukh National park, which consists of 90 Hamlets belonging to 40 revenue villages and about 1300 families living within the outer boundaries of Kudremukh National Park, for whom it is proposed to give the following Rehabilitation and Resettlement Package.

**I. The Resettlement & Rehabilitation Package is worked out as under:**

a. The evacuees will be eligible for compensation fixed as per Land Acquisition Act for their own land, structure, and malki existing on their land.

b. Those who have encroached Revenue land and who are eligible to be regularized as per the existing rules will be eligible for compensation for those lands.

c. The encroachers of Minor Forest and State Forest will be eligible for compensation for the area enchoroched prior to 1980 and are eligible to be regularized.

**II. House plot:** Every family so displaced from the kudremukh National Park will be eligible for free house plot as follows;

| Sl.No. | Extent of Landowner | Size of the House site | Cash in lieu of the House site |
|---|---|---|---|
| I. 1. | Less than 0.25 Ha | 100 Sq.M. | Rs.5000-00 |
| 2. | 0.25-0.35 Ha | 200 Sq.M. | Rs.10000-00 |
| 3. | 3.51-6.75 Ha | 300 Sq.M. | Rs.15000-00 |
| 4. | 6.76-10.00 Ha | 400 Sq.M. | Rs.20000-00 |
| 5. | More than 10.00 Ha | 400 Sq.M. | Rs. 20000-00 |
| II. | Major sons (2) and unmarried daughters over 35 years of age adult brothers if any living separately. | 100 Sq.M. | Rs.5000-00 |
| III. | Landless, houseless | 100 Sq.M. | Rs.5000-00 |

**II.** Each PDF from National Park including major (2) sons and unmarried daughters above 35 years age are eligible for a house construction grant of Rs.30,000. If the number of members of the family are 5 and less and Rs.40,000 if the number of members of the family are more than 5.

**III.** PDFs are allowed to carry salvage materials free of cost.

**IV. Transporation:**

Each PDFs is eligible for Rs.5,000 if the number of members of the family is 5 and less and Rs.8000-00 if the number of members of the family is more than 5 as a lump sum grant.

**V.** Full Royalty on stones and sand used by each PDF is waived.

**VI.** PDF will be eligible for a subsistence grant of Rs. 2,800 per family per month for 6 months.

**VII.** They will also be eligible to a land purchase grant as follows:

| **Sl. No.** | **Type of land Holder** | **Land Holdings** | **Land to be granted** | **In lieu of land one time compensation to be paid** |
|---|---|---|---|---|
| 1. | Big Farmer-A | Land owners with more than 10 Acres of land | 5-00 Acres of land | Rs.2.50 Lakhs |
| 2. | Big Farmers-B | Land owners with more than 5 Acres of land | 3-00 acres of land | Rs.1.50 Lakhs |
| 3. | Small and marginal farmers and the landless | Landless and land owners from 1 Acres to 5 Acres | 2-00 Acres of land | Rs.1.00 Lakhs |

**IX.** The Stamp duty will be waived for the amount equal to the compensation and the grant received.

**X.** The marginal farmers and the landless agricultural laboures and rural artisans whose work or trade, or business has been adversely affected as a result of displacement will be eligible for a lump sum grant of Rs. 20000/- under income generation scheme.

**XI.** The Forest Department while sending the proposal has stated that the total amount required for land acquisition would be Rs. 133.20 Crores and the cost of rehabilitation and resettlement would be Rs. 33.24 crores, totaling Rs. 166.44 crores. The cost of Land Acquisition would be met by the Government of India and the cost of rehabilitation and resettlement is to be met out of the State funds.

**XII.** When the matter was referred to Finance Department, it has opined as follows;

"Finance Department agrees to the proposal of Revenue Department for the proposed Land Acquisition and Rehablitation Package for evacuees in Kudremukh National Park Area.

Since major part of the money is proposed to be met out of the sanction from the Government of India, it is hoped that necessary action and money are obtained from GOI."

**XIII.** The work of acquisition and rehabilitation of people residing in Kudremukh National Park will be taken up in phases. In the first phase it is estimated that 201 PDF of Chickmagalure Districts will be evacuated. For that, the expenditure towards land acquisition would be Rs. 18.35 crores and the cost of resettlement and rehabilitation would be Rs.4.84 crores, totalling Rs.23.19 crores.

In the above circumstances it is requested to sanction Rs.166.44 Crores for the Land Acquition and Rehabilitation and Resettlement Package to the displaced P.D.F. from Kudremukh National Park, out of which Rs. 133.21 Crores will be spend towards land acquition and Rs.33.23 Crores will be spend towards rehabilitation package.

**ORDER**

After careful consideration, sanction for the Rehabilitation & Resettlement Package for the Project Displaced Families of Kudremukh National Park is accorded. The Forest Department is to release the necessary grants.

**I. The Resettlement & Rehabilitation Package is worked out as under:**

d. The evacuees will be eligible for compensation fixed as per Land Acquisition Act for their own land, structure, and malki existing on their land.

e. Those who have encroached Revenue land and who are eligible to be regularized as per the existing rules will be eligible for compensation for those lands.

f. The encroachers of Minor Forest and State Forest will be eligible for compensation for the area enchoroched prior to 1980 and are eligible to be regularized.

**III. House plot:** Every family so displaced from the kudremukh National Park will be eligible for free house plot as follows;

| Sl.No. | Extent of Landowner | Size of the House site | Cash in lieu of the House site |
|---|---|---|---|
| I. 1. | Less than 0.25 Ha | 100 Sq.M. | Rs.5000-00 |
| 2. | 0.25-0.35 Ha | 200 Sq.M. | Rs.10000-00 |
| 3. | 3.51-6.75 Ha | 300 Sq.M. | Rs.15000-00 |
| 4. | 6.76-10.00 Ha | 400 Sq.M. | Rs.20000-00 |
| 5. | More than 10.00 Ha | 400 Sq.M. | Rs. 20000-00 |
| II. | Major sons (2) and unmarried daughters over 35 years of age adult brothers if any living separately. | 100 Sq.M. | Rs.5000-00 |
| III. | Landless, houseless | 100 Sq.M. | Rs.5000-00 |

**VIII.** Each PDF from National Park including major (2) sons and unmarried daughters above 35 years age are eligible for a house construction grant of Rs.30,000. If the number of members of the family are 5 and less and Rs.40,000 if the number of members of the family are more than 5.

**IX.** PDFs are allowed to carry salvage materials free of cost.

**X. Transporation:**

Each PDFs is eligible for Rs.5,000 if the number of members of the family is 5 and less and Rs.8000-00 if the number of members of the family is more than 5 as a lump sum grant.

**XI.** Full Royalty on stones and sand used by each PDF is waived.

**XII.** PDF will be eligible for a subsistence grant of Rs. 2,800 per family per month for 6 months.

**XIII.** They will also be eligible to a land purchase grant as follows:

| Sl. No. | Type of land Holder | Land Holdings | Land to be granted | In lieu of land one time compensation to be paid |
|---|---|---|---|---|
| 1. | Big Farmer-A | Land owners with more than 10 Acres of land | 5-00 Acres of land | Rs.2.50 Lakhs |
| 2. | Big Farmers-B | Land owners with more than 5 Acres of land | 3-00 acres of land | Rs.1.50 Lakhs |
| 3. | Small and marginal farmers and the landless | Landless and land owners from 1 Acres to 5 Acres | 2-00 Acres of land | Rs.1.00 Lakhs |

**IX.** The Stamp duty will be waived for the amount equal to the compensation and the grant received.

**X.** The marginal farmers and the landless agricultural laboures and rural artisans whose work or trade, or business has been adversely affected as a result of displacement will be eligible for a lump sum grant of Rs. 20000/- under income generation scheme.

This order issues with concurrences of the Finance Department vide U.O. Note FD 284 Exp-7 2004 dated: 20.07.2004.

By Order in the name of the Governor of Karnataka,

**M.A. RAJASEKAR**

PR-948 Under Secretary to Government, Revenue Department.

**ಇಂಧನ ಸಚಿವಾಲಯ**

**ವಿಷಯ:** ಮೆಸರ್ಸ್ ಸುಜ್ಲಾನ್ ಡೆವಲಪರ್ಸ್ ಪ್ರೈ. ಲಿಮಿಟೆಡ್ ಎಂಬ ಕಂಪೆನಿಯ ಹೆಸರನ್ನು ಮೆಸರ್ಸ್ ಸುಜ್ಲಾನ್ ಡೆವಲಪರ್ಸ್ ಲಿಮಿಟೆಡ್ ಎಂದು ಬದಲಾಯಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಇಂಇ 56 ಎನ್‌ಸಿಇ 2004, ದಿನಾಂಕ: 12.03.2004.

2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ./ 08/ ಎಸ್‌ಡಿಪಿಎಲ್/ 2005/ 848 ದಿನಾಂಕ:03.05.2005.

**ಪ್ರಸ್ತಾವನೆ:**

ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮೆಸರ್ಸ್ ಸುಜ್ಲಾನ್ ಡೆವಲಪರ್ಸ್ ಪ್ರೈ. ಲಿಮಿಟೆಡ್ ಎಂಬ ಕಂಪೆನಿ ಹೆಸರಲ್ಲಿ ಕರ್ನಾಟಕದಲ್ಲಿ 127 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಅನುಷ್ಠಾನಕ್ಕಾಗಿ ಅನುಮತಿ ನೀಡಲಾಗಿದೆ.

ಸದರಿ ಕಂಪನಿಯವರು ತಮ್ಮ ಕಂಪೆನಿಯ ಹೆಸರನ್ನು ಮೆಸರ್ಸ್ ಸುಜ್ಲಾನ್ ಡೆವಲಪರ್ಸ್ ಲಿಮಿಟೆಡ್ ಎಂದು ಬದಲಾಯಿಸಿರುವುದರಿಂದ ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಕಂಪೆನಿ ಹೆಸರನ್ನು ಮೆಸರ್ಸ್ ಸುಜ್ಲಾನ್ ಡೆವಲಪರ್ಸ್ ಲಿಮಿಟೆಡ್ ಎಂದು ಬದಲಾಯಿಸಿ ಆದೇಶಿಸಬೇಕೆಂದು ಕೋರಿರುತ್ತಾರೆ. ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 154 ಎನ್‌ಸಿಇ 2005, ಬೆಂಗಳೂರು, ದಿನಾಂಕ: 20ನೇ ಜೂನ್, 2005**

ಮೆಸರ್ಸ್ ಸುಜ್ಲಾನ್ ಡೆವಲಪರ್ಸ್ ಪ್ರೈ. ಲಿಮಿಟೆಡ್ ಎಂದಿದ್ದ ಕಂಪೆನಿಯ ಹೆಸರನ್ನು ಮೆಸರ್ಸ್ ಸುಜ್ಲಾನ್ ಡೆವಲಪರ್ಸ್ ಲಿಮಿಟೆಡ್ ಎಂದು ಬದಲಾಯಿಸಿರುವುದನ್ನು ಅನುಮೋದಿಸಲಾಗಿದೆ ಹಾಗೂ ಸುಜ್ಲಾನ್ ಡೆವಲಪರ್ಸ್ ಪ್ರೈ. ಲಿಮಿಟೆಡ್ ಕಂಪೆನಿ ಹೆಸರಲ್ಲಿ ಇಂಧನ ಇಲಾಖೆಯಿಂದ ಪವನ ವಿದ್ಯುತ್ ಯೋಜನೆಗಾಗಿ ನೀಡಿರುವ ಆದೇಶಗಳೆಲ್ಲವನ್ನು ಮೆಸರ್ಸ್ ಸುಜ್ಲಾನ್ ಡೆವಲಪರ್ಸ್ ಲಿಮಿಟೆಡ್ ಹೆಸರಿನಡಿಯಲ್ಲಿ ವರ್ಗಾಯಿಸಲಾಗಿದೆ ಎಂದು ತಿಳಿಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್.961 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**EDUCATION SECRETARIAT**

**CORRIGENDUM**

**No. ED 247 YOSAKA 2005, Bangalore, Dated: 30th June, 2005**

**Sub:** Centrally sponsored scheme of integrated education for Disabled children-implementation in the State of Karnataka During 2003-04 release of central aid-reg.,

**Ref:** 1. G.O. No. ED 247 YOSAKA 2003 Dated: 02.06.2005.
[ED 22 SWIMARA (UNIQUE) 2005, Dated: 02.06.2005]

2. G.O. No. ED 247 YOSAKA 2003 Dated: 14.06.2005.
   [ED 23 SWIMARA (UNIQUE) 2005, Dated: 14.06.2005]

In two Government orders read above Rs.2,37,17,436 (two crore thirty seven lakh seventeen thousand four hundred and thirty six rupees), and Rs. 74,82,648/- (Rupees seventy four lakh eighty two thousand six hundred and forty eight) only were released respectively.

In partial modification of the above orders, the heads of account prescribed in the above orders shall be read as 2202-80-196-1-02 with effect from 14.06.2005.

The chief Account officers of Zilla panchayats shall debit the changed heads of account on the bill and get the accounts transferred to Zilla panchayat fund account-I by means of TTRS in the respective treasuries.

By Order and in the name of the Governor of Karnataka,
**K. SRIKANTESHWARA**
Special Officer and Ex-Officio,
Joint Secretary to Government,
Education Department (planning).

PR- 963

## CORRIGENDUM

### No. ED 202 YOSAKA 2005, Bangalore, Dated: 28th June, 2005

**Sub:** Centrally sponsored scheme of integrated education for Disabled children-implementation in the State of Karnataka During 2004-05 release of central aid.

**Ref:** 1. G.O. No. ED 202 YOSAKA 2004 Dated: 17.06.2005.
   [ED 24 SWIMARA (UNIQUE) 2005, Dated: 17.06.2005]
2. G.O. No. ED 202 YOSAKA 2004 Dated: 17.06.2005.
   [ED 25 SWIMARA (UNIQUE) 2005, Dated: 17.06.2005]
3. G.O. No. ED 202 YOSAKA 2004 Dated: 17.06.2005.
   [ED 26 SWIMARA (UNIQUE) 2005, Dated: 17.06.2005]

In three Government orders read above Rs.1,36,01,921 (one crore thirty six lakh one thousand nine hundred and twenty one Rupees), Rs. 7,62,305/- (Rupees seven lakh sixty two thousand three hundred and five) and Rs. 3,82,98,115.50 (Rupees three crore eighty two lakh nenety eight thousand one hundred and fifteen and paise) were released respectively.

In partial modification of the above orders for the heads of account prescribed in the above orders shall be read as 2202-80-196-1-02 with effect from 17.06.2005.

The chief Account officers of Zilla panchayats shall debit the changed heads of account on the bill and get the accounts transferred to Zilla panchayat fund account-I by means of TTRS in the respective treasuries.

By Order and in the name of the Governor of Karnataka,
**K. SRIKANTESHWARA**
Special Officer and Ex-Officio,
Joint Secretary to Government,
Education Department (planning).

PR- 964

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಬಿ.ಎಸ್. ನಲ್ಲಣ್ಣ, ಸಹಾಯಕ ಆಯುಕ್ತರು, ಮುಜರಾಯಿ ಕಾಮಗಾರಿಗಳು ನಗರ ಸಭಾ ವಲಯ, ಬೆಂಗಳೂರು ಹಾಗೂ ಅಂದಿನ ಸಹಾಯಕ ಆಯುಕ್ತರು, ಹೆಚ್.ಆರ್. ಅಂಡ್ ಸಿ.ಇ. ಉಡುಪಿ ಜಿಲ್ಲೆ ಇವರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸುವ ಬಗ್ಗೆ.

**ಓದಲಾಗಿದೆ:** 1. ತಿಳುವಳಿಕೆ ಪತ್ರ ಸಂಖ್ಯೆ: ಕಂಇ 80 ಮುಸೇವಿ 2000 ದಿನಾಂಕ: 18.05.2000.
2. ಶ್ರೀ ಬಿ.ಎಸ್. ನಲ್ಲಣ್ಣ, ಅಂದಿನ ಸಹಾಯಕ ಆಯುಕ್ತರು, ಹೆಚ್.ಆರ್. ಅಂಡ್ ಸಿ.ಇ. ಉಡುಪಿ ರವರ ದಿನಾಂಕ: 10.06.2000ರಂದು ನೀಡಿರುವ ಲಿಖಿತ ಹೇಳಿಕೆ.

**ಪ್ರಸ್ತಾವನೆ:**

ಶ್ರೀ ಬಿ.ಎಸ್. ನಲ್ಲಣ್ಣ, ಸಹಾಯಕ ಆಯುಕ್ತರು, ಮುಜರಾಯಿ ಕಾಮಗಾರಿಗಳು, ನಗರ ಸಭಾವಲಯ, ಬೆಂಗಳೂರು ರವರು ಸಹಾಯಕ ಆಯುಕ್ತರು, ಹೆಚ್.ಆರ್. ಅಂಡ್ ಸಿ.ಇ. ಉಡುಪಿ ಜಿಲ್ಲೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಉಡುಪಿ ತಾಲ್ಲೂಕು: ಕೊರಂಗ್ರಪಾಡಿಯ ಶ್ರೀ ಮಹಾವಿಷ್ಣು ಮೂರ್ತಿ ದೇವಾಲಯ, ಈ ಸಂಸ್ಥೆಯ ಮೊಕ್ತೇಸರರನ್ನು ಸಾರ್ವಜನಿಕ ಸಭೆಯಲ್ಲಿ ಆಯ್ಕೆ ವಿಚಾರದಲ್ಲಿ ಉಡುಪಿ ವಿಭಾಗದ ಪರಿವೀಕ್ಷಕರು ಸಲ್ಲಿಸಿದ ವರದಿ ಸಂಖ್ಯೆ: ಇಡಿಎಸ್/ 121/99-2000 ದಿನಾಂಕ: 08.06.1999ರ ಆಧಾರದ ಮೇಲೆ ಈ ಹಿಂದಿನ ದಾಖಲೆಗಳನ್ನು ಪರಿವೀಕ್ಷಕರ ವರದಿಯನ್ನು ಪರಿಶೀಲಿಸದೇ ಧಾರ್ಮಿಕ ದತ್ತಿ ಆಯುಕ್ತರ ಆದೇಶ ಹೊರಡಿಸಿದ ನಂತರ ಇದಕ್ಕೆ ವಿರುದ್ಧ ಪರಿಣಾಮವಾಗುವಂತಹ ಹಾಗೂ ಈ ಆದೇಶವು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಪ್ರಶ್ನಿತವಾಗಿ ವಿಷಯವು ಸಬ್‌ಜುಡಿಸ್ ಆಗಿದ್ದರು. ಶ್ರೀ ಮಾಧವಶೆಟ್ಟಿ ಎಂಬುವವರಿಗೆ ಹಿಂಬರಹ

ನೀಡಿರುವ ಆರೋಪದ ಮೇಲೆ ಸದರಿಯವರ ವಿರುದ್ಧ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 11ರನ್ವಯ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲು ಪ್ರಸ್ತಾಪಿಸಿ, ಮೇಲೆ ಓದಲಾದ (1)ರ ದಿನಾಂಕ: 18.05.2000ರ ತಿಳುವಳಿಕೆ ಪತ್ರದಲ್ಲಿ ತಮ್ಮ ಪ್ರತಿವಾದದ ಲಿಖಿತ ಹೇಳಿಕೆಯನ್ನು ಸಲ್ಲಿಸಲು ಕೋರಲಾಗಿತ್ತು.

ಶ್ರೀ ಬಿ.ಎಸ್. ನಲ್ಲಣ್ಣ ರವರು ಮೇಲೆ ಓದಲಾದ (2)ರಂತೆ ನೀಡಿರುವ ಲಿಖಿತ ಹೇಳಿಕೆಯಲ್ಲಿ ಶ್ರೀ ಮಹಾವಿಷ್ಣು ಮೂರ್ತಿ ದೇವಾಲಯದ ಮೊಕ್ತೇಸರರಿಗೆ ಚುನಾವಣೆ ಬಗ್ಗೆ ಹಿಂಬರಹ ನೀಡಿರುವುದು ನಿಜವೆಂದು, ಈ ಹಿಂಬರಹವನ್ನು ಪರಿವೀಕ್ಷಕರು ವರದಿ ಸಂಖ್ಯೆ: 121/1999-2000 ದಿನಾಂಕ: 08.06.1999ರನ್ವಯ ನೀಡಲಾಗಿದೆ. ಪರಿವೀಕ್ಷಕರ ಹಿಂದಿನ ವರದಿ ಅವಲಂಬಿಸಬೇಕೆಂಬ ಬಗ್ಗೆ ಪರಿವೀಕ್ಷಕರ ಹಿಂದಿನ ದಿನಾಂಕ: 22.08.1997ರ ವರದಿಯನ್ನು ಏರಿಯಾ ಕಮಿಟಿಯಿಂದ ತಳ್ಳಿಹಾಕಲಾಗಿತ್ತು. ತಾವು ಹೊಸದಾಗಿ ಕರ್ತವ್ಯಕ್ಕೆ ಹಾಜರಾಗಿದ್ದು, ಕಡತದಲ್ಲಿ ಇನ್ನಿತರೆ ದಾಖಲೆಗಳು ಇರಲಿಲ್ಲ. ಹಿಂಬರಹವು ನ್ಯಾಯಾಲಯದಲ್ಲಿ ಬಾಕಿ ಇರುವ proceedingsನ್ನು comment ಮಾಡುವಂತಹದಲ್ಲ. ಟ್ರಸ್ಟಿಗಳನ್ನು ಆಯ್ಕೆ ಮಾಡಿರುವುದಕ್ಕೆ ದಾಖಲೆಗಳು ಇರಲಿಲ್ಲ ಎಂದು ಈ ಬಗ್ಗೆ ತಮ್ಮನ್ನು ಆರೋಪದಿಂದ ಮುಕ್ತಗೊಳಿಸಬೇಕೆಂದು ತಿಳಿಸಿರುತ್ತಾರೆ.

ಉಡುಪಿ ತಾಲ್ಲೂಕು, ಕೊರಂಗ್ರಪಾಡಿಯ ಶ್ರೀ ಮಹಾವಿಷ್ಣು ಮೂರ್ತಿ ದೇವಾಲಯ ಈ ಸಂಸ್ಥೆಯ ಮೊಕ್ತೇಸರರನ್ನು ಸಾರ್ವಜನಿಕ ಸಭೆಯಲ್ಲಿ ಆಯ್ಕೆ ಮಾಡುವ ವಿಚಾರದಲ್ಲಿ ಅಂದಿನ ಸಹಾಯಕ ಆಯುಕ್ತರು, ಉಡುಪಿ ಹಾಗೂ ಪರಿವೀಕ್ಷಕರು, ಸಹಾಯಕ ಆಯುಕ್ತರ ಕಛೇರಿ, ಉಡುಪಿ ಇವರಿಬ್ಬರ ಮೇಲೆ ಇಲಾಖಾ ವಿಚಾರಣೆ ನಡೆಸಬೇಕಾಗಿದ್ದು, ಈಗಾಗಲೇ ಪರಿವೀಕ್ಷಕರ ಮೇಲೆ ಧಾರ್ಮಿಕ ದತ್ತಿ ಆಯುಕ್ತರು ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ನೀಡಿದ ವಿಚಾರಣಾ ವರದಿಯನ್ನು ಒಪ್ಪಿ, ಶ್ರೀ ಅಶೋಕ್ ನಾರಾಯಣ ನಾಯಕ್, ಪರಿವೀಕ್ಷಕರು ಇವರನ್ನು ಆರೋಪ ಮುಕ್ತರನ್ನಾಗಿ ಆದೇಶಿಸಿರುತ್ತಾರೆ. ಶ್ರೀ ನಲ್ಲಣ್ಣ ಇವರ ಮೇಲೆ ಇಲಾಖಾ ವಿಚಾರಣೆ ನಡೆಸಲು ಉದ್ದೇಶಿಸಿರುವ ವಿಷಯವು ಸಹ ಇದೇ ವಿಷಯವಾಗಿದ್ದು, ಶ್ರೀ ಅಶೋಕ್ ನಾರಾಯಣ ನಾಯಕ್ ರವರನ್ನು ದೋಷಮುಕ್ತರನ್ನಾಗಿಸಿದ್ದು, ಶ್ರೀ ನಲ್ಲಣ್ಣ ರವರ ಪ್ರಕರಣದಲ್ಲಿ ಸಂಸ್ಥೆಗಾಗಲೀ ಅಥವಾ ಸರ್ಕಾರಕ್ಕಾಗಲಿ ಯಾವುದೇ ರೀತಿಯ ಬಾಧಕವಾಗಲೀ, ಆರ್ಥಿಕ ನಷ್ಟ ಉಂಟಾಗಿರುವುದಿಲ್ಲದಿರುವುದು ಹಾಗೂ ಇವರ ಮೇಲಿನ ಆರೋಪಗಳು ಯಾವುದೇ ಗುರುತರವಾದ ಆರೋಪವಲ್ಲದ ಕಾರಣ ಶ್ರೀ ಬಿ.ಎಸ್. ನಲ್ಲಣ್ಣ ರವರನ್ನು ಆರೋಪ ಮುಕ್ತರನ್ನಾಗಿಸಲು ಸರ್ಕಾರವು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 80 ಮುಸೇವಿ 2000, ಬೆಂಗಳೂರು, ದಿನಾಂಕ: 28ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶ್ರೀ ಬಿ.ಎಸ್. ನಲ್ಲಣ್ಣ, ಸಹಾಯಕ ಆಯುಕ್ತರು, ಮುಜರಾಯಿ ಕಾಮಗಾರಿಗಳು, ನಗರಸಭಾ ವಲಯ, ಬೆಂಗಳೂರು ಹಾಗೂ ಅಂದಿನ ಸಹಾಯಕ ಆಯುಕ್ತರು ಹೆಚ್.ಆರ್. ಅಂಡ್ ಸಿ.ಇ. ಉಡುಪಿ ರವರ ಮೇಲೆ ತಿಳುವಳಿಕೆ ಪತ್ರ ಸಂಖ್ಯೆ: ಕಂಇ 80 ಮುಸೇವಿ 2000 ದಿನಾಂಕ: 18.05.2000ರಲ್ಲಿ ಹೊರಿಸಲಾದ ಆರೋಪದಿಂದ ಮುಕ್ತಗೊಳಿಸಿ, ಅವರ ವಿರುದ್ಧ ಪ್ರಾರಂಭಿಸಲು ಉದ್ದೇಶಿಸಿರುವ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ರಮೇಶ್ ಕೆ. ಜಾಗೀರ್‌ದಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ).

ಪಿ.ಆರ್.972

**ಇಂಧನ ಸಚಿವಾಲಯ**

**ವಿಷಯ:** ಮೆ: ಕಾವೇರಿ ಹೈಡ್ರೊ ಎನರ್ಜಿ ಲಿಮಿಟೆಡ್ ಕಂಪನಿಗೆ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಅಕ್ಕಿ ಹೆಬ್ಬಾಳು ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಡಿಇ 99 ಎನ್‌ಸಿಇ 01, ದಿನಾಂಕ: 30.10.2001.
2. ಸರ್ಕಾರಿ ಆದೇಶ ಸಂಖ್ಯೆ: ಇಂಇ 34 ಎನ್‌ಸಿಇ 2003 ದಿನಾಂಕ: 25.02.2003.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ./ 06/ ಅಕ್ಕಿಹೆಬ್ಬಾಳು/ 2004/ 596 ದಿನಾಂಕ: 21.03.2005.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆ: ಕಾವೇರಿ ಹೈಡ್ರೊ ಎನರ್ಜಿ ಲಿಮಿಟೆಡ್ ಕಂಪನಿಗೆ ಮಂಡ್ಯ ಜಿಲ್ಲೆಯ ಕೆ.ಆರ್.ಪೇಟೆ ತಾಲ್ಲೂಕಿನ ಅಕ್ಕಿ ಹೆಬ್ಬಾಳು ಎಂಬಲ್ಲಿ ಹೇಮಾವತಿ ನದಿಗೆ ಅಡ್ಡಲಾಗಿ 4 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಆದೇಶದಲ್ಲಿ ಸದರಿ ಕಂಪನಿಗೆ ಹಂಚಿಕೆಯಾಗಿರುವ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 4 ಮೆಗಾ ವ್ಯಾಟ್‌ನಿಂದ 4.5 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿದೆ.

ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ: ಕಾವೇರಿ ಹೈಡ್ರೊ ಎನರ್ಜಿ ಲಿಮಿಟೆಡ್ ಕಂಪನಿಗೆ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಅಕ್ಕಿ ಹೆಬ್ಬಾಳು ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶವನ್ನು ಇನ್ನೂ 15 ತಿಂಗಳುಗಳವರೆಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ. ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 112 ಎನ್‌ಸಿಇ 2005, ಬೆಂಗಳೂರು, ದಿನಾಂಕ: 27ನೇ ಜೂನ್, 2005**

ಮೆ: ಕಾವೇರಿ ಹೈಡ್ರೊ ಎನರ್ಜಿ ಲಿಮಿಟೆಡ್ ಕಂಪನಿಗೆ ಮಂಡ್ಯ ಜಿಲ್ಲೆಯ ಕೆ.ಆರ್. ಪೇಟೆ ತಾಲ್ಲೂಕಿನ ಅಕ್ಕಿ ಹೆಬ್ಬಾಳು ಎಂಬಲ್ಲಿ ಹೇಮಾವತಿ ನದಿಗೆ ಅಡ್ಡಲಾಗಿ ಹಂಚಿಕೆಯಾಗಿರುವ 4.5 ಮೆಗಾ ವ್ಯಾಟ್ ಸಾಮರ್ಥ್ಯದ ಅಕ್ಕಿ ಹೆಬ್ಬಾಳು ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಮುಂದಿನ 15 ತಿಂಗಳುಗಳ ಅವಧಿಗೆ ವಿಸ್ತರಿಸಲಾಗಿದೆ. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್.973

**ವಿಷಯ:** ಮೆ: ಭೋರುಕ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಗೆ 5 ಮೆಗಾ ವ್ಯಾಟ್ ಸಾಮರ್ಥ್ಯದ ಇರುಪ್ಪು ಕಿರು ಜಲ ವಿದ್ಯುತ್ ಯೋಜನೆಗಾಗಿ ಕಾಲಾವಕಾಶ ವಿಸ್ತರಣೆ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಡಿಇ 28 ಎನ್‌ಸಿಇ 96(20), ದಿನಾಂಕ: 24.07.1996.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಅಧಿಕೃತ ಜ್ಞಾಪನ ಸಂಖ್ಯೆ: ಕೆ.ಆರ್.ಇ.ಡಿ./ 06/ ಇರುಪ್ಪು/ 2000 ದಿನಾಂಕ: 23.11.2000.
3. ಸರ್ಕಾರಿ ಆದೇಶ ಸಂಖ್ಯೆ: ಡಿಇ 69 ಎನ್‌ಸಿಇ 1997 ದಿನಾಂಕ: 19.03.2001.
4. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆ.ಆರ್.ಇ.ಡಿ./ 06/ ಇರುಪ್ಪು/ 2005/961 ದಿನಾಂಕ:26.05.2005.

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆ: ಯುನಿವರ್ಸಲ್ ಇಂಜಿನಿಯರಿಂಗ್ (ಈಗ ಭೋರುಕ ಪವರ್ ಕಾರ್ಪೋರೇಷನ್ ಲಿಮಿಟೆಡ್ ಕಂಪನಿಗೆ ವರ್ಗವಾಗಿದೆ) ಕಂಪನಿಗೆ ಕೊಡುಗು ಜಿಲ್ಲೆಯ ಇರುಪ್ಪು ಫಾಲ್ಸ್‌ಗೆ ಅಡ್ಡಲಾಗಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಇರುಪ್ಪು ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಅಧಿಕೃತ ಜ್ಞಾಪನದಲ್ಲಿ ಸದರಿ ಯೋಜನೆಯನ್ನು ಮೆ: ಯುನಿವರ್ಸಲ್ ಇಂಜಿನಿಯರಿಂಗ್ ಕಂಪನಿಯಿಂದ ಮೆ: ಭೋರುಕ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಗೆ ವರ್ಗಾಯಿಸಿದೆ.

ಓದಲಾದ (3)ರ ಆದೇಶದಲ್ಲಿ ಇರುಪ್ಪು ಕಿರು ಜಲ ವಿದ್ಯುತ್ ಯೋಜನೆ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು 2 ವರ್ಷಗಳವರೆಗೆ ವಿಸ್ತರಿಸಲಾಗಿತ್ತು.

ಓದಲಾದ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ವ್ಯವಸ್ಥಾಪಕ ನಿರ್ದೇಶಕರು ಮೆ: ಭೋರುಕ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಗೆ 5 ಮೆಗಾ ವ್ಯಾಟ್ ಸಾಮರ್ಥ್ಯದ ಇರುಪ್ಪು ಕಿರು ಜಲ ವಿದ್ಯುತ್ ಯೋಜನೆಗಾಗಿ ಅರಣ್ಯ ಇಲಾಖೆಯಿಂದ ಇನ್ನೂ ಅನುಮತಿ ಪಡೆಯಬೇಕಾಗಿರುವುದರಿಂದ ಯೋಜನೆಯ ಅನುಷ್ಠಾನಕ್ಕಾಗಿ 3 ವರ್ಷಗಳ ಕಾಲಾವಕಾಶವನ್ನು ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ. ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 157 ಎನ್‌ಸಿಇ 2005, ಬೆಂಗಳೂರು, ದಿನಾಂಕ: 28ನೇ ಜೂನ್, 2005**

ಮೆ: ಭೋರುಕ ಪವರ್ ಕಾರ್ಪೊರೇಷನ್ ಲಿಮಿಟೆಡ್ ಕಂಪನಿಗೆ ಕೊಡುಗು ಜಿಲ್ಲೆಯ ಇರುಪ್ಪು ಫಾಲ್ಸ್‌ಗೆ ಅಡ್ಡಲಾಗಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಇರುಪ್ಪು ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಎರಡು ವರ್ಷಗಳ ಅವಧಿಗೆ ವಿಸ್ತರಿಸಲಾಗಿದೆ. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್.974 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

## ತಿದ್ದೋಲೆ

**ಸಂಖ್ಯೆ: ಸಂಕಇ 205 ಕರಅ 2004, ಬೆಂಗಳೂರು, ದಿನಾಂಕ: 27ನೇ ಜೂನ್, 2005**

ದಿನಾಂಕ: 10.12.1996ರಂದು ಹೊರಡಿಸಿದ ಸರ್ಕಾರಿ ಆದೇಶ ಸಂಖ್ಯೆ: ಸಂಕಇ 24 ಕರಅ 1996ರ ಕ್ರಮ ಸಂಖ್ಯೆ 2ರಲ್ಲಿರುವ ಸರ್ಕಾರದ ಕಾರ್ಯದರ್ಶಿಗಳು ಎಂಬುದರ ಬದಲಾಗಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು ಎಂಬುದಾಗಿ ಮತ್ತು ಅದರ ಎದುರಿಗೆ ಇರುವ ಸದಸ್ಯರು ಎಂಬುದರ ಬದಲಾಗಿ ಉಪಾಧ್ಯಕ್ಷರು ಎಂದು ತಿದ್ದಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್.ಆರ್. ಸಂಬರಗಿ**

ಪಿ.ಆರ್.975 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## COMMERCE AND INDUSTRIES SECRETARIAT

**Sub:** Transfer of Mining lease No.2433 held by Smt. K.M. Parvathamma in favour of M/s Nidhi Mining Pvt. Ltd.,

**Ref:** Letter No. DMG/ MLS/02/TRN/2005/ 225 Dated: 21.04.2005 of the Director of Mines and Geology, Bangalore.

**Preamble:**

The Director, Department of Mines and Geology. Bangalore in his letter read above, has stated that Smt. K.M. Parvathamma is holding Mining Lease No.2433 for Iron and Red Oxide ore over an area of 31.835 Hectares in Ubbalagundi villages of Sandur taluk, Bellary district for a period of 20 years w.e.f. 25.04.1997. The lessee has requested to transfer the M.L.No.2433 in favour of M/s Nidhi Mining Pvt.Ltd., to develop the mines on large scale basis and to exploit the mineral to the maximum extent with additional investment and machinery. M/s Nidhi Mining Pvt.Ltd., have also agreed to take over the Mining lease on transfer as per Rule 37 of MC Rules. 1960 subject to terms and conditions of mining lease. Since both

the applicants have fulfilled all the requirements as per MC Rules, 1960, the Director of Mines and Geology has recommended to the Government for transfer of Mining Lease No.2433 held by Smt. K.M. Parvathamma in favour of M/s Nidhi Mining Pvt.Ltd., as per rule 37 of M.C. Rules, 1960.

The proposal has been examined.

**Government Order No. CI.109:MMM, 2005, Bangalore, Dated: 28th June, 2005**

In the circumstances explained in the preamble, the Government are pleased to accord sanction under Rule 37 of M.C. Rules, 1960 for transfer of Mining Lease No.2433 held by Smt. K.M. Parvathamma in Ubbalagundi village of Sandur taluk, Bellary district over an area of 31.835 hectares in favour of M/s Nidhi Mining Pvt.Ltd.

By Order and in the name of the Governor of Karnataka,
**JAGADISH JOIS**
Under Secretary to Government (Mines),
Commerce and Industries Department.

PR- 976

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** 2004-05ರ ಸಾಲಿನ ಹಿಂಗಾರು ಋತುವಿನಲ್ಲಿ ಬೆಂಬಲ ಬೆಲೆ ಯೋಜನೆಯಡಿ ರೈತರಿಂದ ಖರೀದಿಸಿ (ಸಂಗ್ರಹಣೆ) ದಾಸ್ತಾನು ಮಾಡಿರುವ ರಾಗಿಯನ್ನು ಎ.ಎ.ವೈ. ಮತ್ತು ಬಿ.ಪಿ.ಎಲ್. ಕಾರ್ಡ್‌ದಾರರಿಗೆ ವಿತರಿಸಲು ಅನುಮೋದನೆ ಕುರಿತು.

**ಓದಲಾಗಿದೆ:** ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಅವರ ಪತ್ರ ಸಂಖ್ಯೆ: ಸಿಎಫ್‌ಎಸ್: ಪಿಡಿ: 24/ 2004-05, ದಿನಾಂಕ: 25.04.2005 ಮತ್ತು 23.05.2005.

**ಪ್ರಸ್ತಾವನೆ:**

2004-05ರ ಹಿಂಗಾರು ಋತುವಿನಲ್ಲಿ ಬೆಂಬಲ ಬೆಲೆ ಯೋಜನೆಯಡಿ ರಾಜ್ಯದ ರೈತರಿಂದ ಖರೀದಿಸಿ (ಸಂಗ್ರಹಣೆ) ದಾಸ್ತಾನು ಮಾಡಿರುವ 50,000 ಮೆಟ್ರಿಕ್ ಟನ್ ರಾಗಿಯನ್ನು ಸಾರ್ವಜನಿಕ ವಿತರಣಾ ಪದ್ಧತಿಯಡಿ ರಾಜ್ಯದ 13 ಜಿಲ್ಲೆಗಳಲ್ಲಿ ಎ.ಎ.ವೈ. ಮತ್ತು ಬಿ.ಪಿ.ಎಲ್. ಕಾರ್ಡ್‌ದಾರರಿಗೆ ಪ್ರತಿ ತಿಂಗಳು (ಮೂರು ತಿಂಗಳು ಮಾತ್ರ) ಗೋಧಿಗೆ ಬದಲಾಗಿ, ರಾಗಿಯನ್ನು ಹಂಚಿಕೆ ಮಾಡಲು ಸರ್ಕಾರದ ಅನುಮೋದನೆ/ ಆದೇಶ ನೀಡುವಂತೆ ಕೋರಿ ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು, ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ. ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರ ಮೇಲೆ ತಿಳಿಸಿದ ಕಾರ್ಡುದಾರರಿಗೆ 2005ರ ಜುಲೈ, ಆಗಸ್ಟ್ ಮತ್ತು ಸೆಪ್ಟೆಂಬರ್ ಮಾಹೆಯಲ್ಲಿ ಗೋಧಿಗೆ ಬದಲಾಗಿ ರಾಗಿಯನ್ನು ವಿತರಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಆನಾಸ 52 ಆರ್‌ಪಿಆರ್ 2004, ಬೆಂಗಳೂರು, ದಿನಾಂಕ: 1ನೇ ಜುಲೈ, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, 2004-05ರ ಹಿಂಗಾರು ಋತುವಿನಲ್ಲಿ ಬೆಂಬಲ ಬೆಲೆ ಯೋಜನೆಯಡಿ ರೈತರಿಂದ ಖರೀದಿಸಿ ಸಂಗ್ರಹಿಸಿರುವ 50,000 ಮೆಟ್ರಿಕ್ ಟನ್ ರಾಗಿಯನ್ನು ರಾಜ್ಯದ 13 ಜಿಲ್ಲೆಗಳ ಎ.ಎ.ವೈ. ಮತ್ತು ಬಿ.ಪಿ.ಎಲ್. ಕಾರ್ಡುದಾರರಿಗೆ 2005ರ ಜುಲೈ, ಆಗಸ್ಟ್ ಮತ್ತು ಸೆಪ್ಟೆಂಬರ್ ಮಾಹೆಯಲ್ಲಿ ಗೋಧಿಗೆ ಬದಲಾಗಿ 5 ಕೆ.ಜಿ. ರಾಗಿಯನ್ನು ಪ್ರತಿ ಹಳದಿ ಪಡಿತರ ಚೀಟಿದಾರರಿಗೆ ಕೆ.ಜಿ.ಗೆ ರೂ.3.00 ದರದಂತೆ ಹಾಗೂ 7 ಕೆ.ಜಿ. ರಾಗಿಯನ್ನು ಅಂತ್ಯೋದಯ ಅನ್ನ ಯೋಜನೆಯ ಪಡಿತರ ಚೀಟಿದಾರರಿಗೆ ಪ್ರತಿ ಕೆ.ಜಿ.ಗೆ ರೂ.2.00ರ ದರದಂತೆ ವಿತರಿಸಲು ಆದೇಶಿಸಿದೆ.

ರಾಗಿ ವಿತರಣೆ ಅವಧಿ ಮತ್ತು ಆ ನಂತರದ ಅವಧಿಯಲ್ಲೂ ಗೋಧಿ ಕಳ್ಳ ಸಾಗಾಣಿಕೆಯಾಗುವುದನ್ನು ತಡೆಗಟ್ಟಲು ಕಟ್ಟುನಿಟ್ಟಿನ ಕ್ರಮಕೈಗೊಳ್ಳುವಂತೆ ಆದೇಶಿಸಿದೆ. ಗೋಧಿ ಕಳ್ಳ ಸಾಗಾಣಿಕೆ ಬಗ್ಗೆ ವರದಿಯಾಗುವ ಪ್ರಕರಣಗಳಲ್ಲಿ ಆಯಾ ಜಿಲ್ಲಾ ಉಪ ನಿರ್ದೇಶಕರುಗಳನ್ನೇ ಜವಾಬ್ದಾರರನ್ನಾಗಿ ಮಾಡಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪ.ಹ. ಕಳ್ಳಿ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಆಹಾರ, ನಾಗರೀಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್.980

## AGRICULTURE AND HORTICULTURE SECRETARIAT

**Sub:** Extension of lease period for the land provided to BSNL for the Microwave repeater station at Nandi Hills.

**Ref:**
1. Government Order No. AAH 499 AHM 79 Dated: 21.06.1982.
2. Letter of Director of Horticulture No. Thoe:Tho.Jum Ni:UPU:Sa Tho Aa-2:5:2004-05/277 Dated: 31.01.2005.

**Preamble:**

Sanction was accorded to lease out a plot measuring 50mX30m at Nandi Hills to BSNL (the then Post and Telegraph Department) for a period of 20 years on an annual rent of Rs.1,000/-for setting up of Micro wave repeater Station vide Government Order read at (1) above. As the lease period has expired on 31.12.2003, the Divisional Engineer Transmission Maintenance BSNL has requested the Director of Horticulture to extend the lease period by another 10 years.

In the letter read at 2 above the Director of Horticulture has opined that, the lease period for the land provided to BSNL for the construction of Micro wave repeater station at Nandi Hills could be extended for a period of 10 years from 01.01.2004, subject to MOU between Horticulture Department and BSNL. In this connection, the Director of Horticulture has suggested that annual lease rent could be raised from Rs.1,000 to Rs.10,000 and without changing the terms and conditions that was imposed earlier.

This issue was examined and the following orders are passed.

**Government Order No. AHD 119 HGM 2005, Bangalore, Dated: 30th June, 2005**

The Government is pleased to extend the lease for a period of 10 years from 01.04.2004. The annual lease rent would be Rs.10,000 per annum subject to the condition that the lease rent would be increased by 10% for every 3 years. The lease amount is to be paid in advance to the Horticulture Department.

This order is issued with the concurrence of Finance Department vide note No.FD 225 Exp-4/05 Dated: 30.05.2005.

By Order and in the name of the Governor of Karnataka,
**N. MANJULAGEETHA**
Under Secretary to Government,
Agriculture and Horticulture Department.

PR- 981

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಿಗೆ ವಿಚಾರಣಾ ವರದಿ ಸಲ್ಲಿಸಿದ್ದಕ್ಕಾಗಿ ಗೌರವ ಧನ ವಾಹನ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 51 ಎಸ್ಇಎನ್ 97 ದಿನಾಂಕ 15.6.2004

2. ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರ ವರದಿ ದಿನಾಂಕ 9.6.2005.

**ಪ್ರಸ್ತಾವನೆ:**

ಶ್ರೀ ಪಿ.ಹೆಚ್. ಗಂಗಾಧರ್‌ರಾವ್, ನಿವೃತ್ತ ಇಂಜಿನಿಯರ್ ಇನ್ ಚೀಫ್ ಇವರು ಈ ಹಿಂದೆ ಕೃಷ್ಣಾ ಮೇಲ್ದಂಡೆ ಯೋಜನೆ ಪುನರ್ ವಸತಿ ಮತ್ತು ಪುನರ್ ನಿರ್ಮಾಣ, ಬಾಗಲಕೋಟೆ ವೃತ್ತ ಸೂಪರಿಂಟೆಂಡಿಂಗ್ ಇಂಜಿನೀಯರ್ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಬ್ಯಾಲಿಗಳ ಸಾಗಣಿಕೆ ಕುರಿತಂತೆ ಹೆಚ್ಚಿನ ದರದಲ್ಲಿ ಖಾಸಗಿಯವರಿಗೆ ಸಾಗಾಣಿಕೆಯನ್ನು ವಹಿಸಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿದ ದುರ್ನಡತೆಯ ಆರೋಪಗಳ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರನ್ನು ಮೇಲೆ(1)ರಲ್ಲಿ ಓದಲಾದ ದಿನಾಂಕ 15.6.2004ರ ಸರ್ಕಾರಿ ಆದೇಶದಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿನಾಂಕ 9.6.2005ರ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಈ ಸಂಬಂಧ ಅವರಿಗೆ ಗೌರವ ಧನ ಹಾಗೂ ವಾಹನ ಭತ್ಯೆ ಮಂಜೂರು ಮಾಡಲು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 51 ಎಸ್ಇಎನ್ 1997 ಬೆಂಗಳೂರು, ದಿನಾಂಕ 24ನೇ ಜೂನ್, 2005**

ಸರ್ಕಾರವು ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರು ಮೇಲ್ಕಂಡ ವಿಚಾರಣೆ ಕುರಿತಂತೆ ದಿನಾಂಕ 9.6.2005 ರಂದು ವಿಚಾರಣಾ ವರದಿ ಸಲ್ಲಿಸಿದ ಕಾರಣ, ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 3 ಸೇಇವಿ 96 ದಿನಾಂಕ 24.4.1998 ರನ್ವಯ ರೂ.5,000/- (ಐದು ಸಾವಿರ ರೂಪಾಯಿಗಳು ಮಾತ್ರ) ಗೌರವ ಧನವನ್ನು ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001, ದಿನಾಂಕ 4.3.2002 ರನ್ವಯ 1,000/- (ಒಂದು ಸಾವಿರ ರೂಪಾಯಿಗಳು ಮಾತ್ರ) ರೂಪಾಯಿಗಳ ವಾಹನ ಭತ್ಯೆಯನ್ನು ಇವರಿಗೆ ಪಾವತಿ ಮಾಡಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಬಗೆಗಿನ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ "2052 ಸಚಿವಾಲಯ ಸಾಮಾನ್ಯ ಸೇವೆಗಳು-090-ಸಚಿವಾಲಯ-01, ಕರ್ನಾಟಕ ಸರ್ಕಾರದ ಸಚಿವಾಲಯ-051-ಜನರಲ್-ಎಕ್ಸ್‌ಪೆನ್ಸಸ್" ರಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

ಪಿ.ಆರ್.903

**ವಿಷಯ:** ಶ್ರೀ ಡಾ. ಬಿ.ಜಿ. ದೇಸಾಯಿ, ನಿವೃತ್ತ ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇಲಾಖೆ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 4 ಎಸ್ಇಎನ್ 2005, ಬೆಂಗಳೂರು ದಿನಾಂಕ: 24ನೇ ಜೂನ್, 2005**

ಡಾ. ಬಿ.ಜಿ. ದೇಸಾಯಿ, (ಹಾಲಿ ನಿವೃತ್ತ) ಇವರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇಲಾಖೆಯಲ್ಲಿ ನಿರ್ದೇಶಕರಾಗಿ ಬೆಂಗಳೂರಿನಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ 2003-04 ಹಾಗೂ 2004-05ನೇ ಸಾಲಿಗಾಗಿ, ಆಸ್ಪತ್ರೆಗಳಿಗೆ ಬೇಕಾದ ವಿವಿಧ

ಸರ್ಜಿಕಲ್ ಉಪಕರಣಗಳು, ಪರಿಕರಗಳು, ಡಿಸ್ಪೋಸಬಲ್ ಸಿರಿಂಜ್‌ಗಳು ಮುಂತಾದ ಸರಕು ಸಾಮಗ್ರಿಗಳನ್ನು ಮೆ. ಸಿಗ್ಮಾ ಮಾರ್ಕೇಟಿಂಗ್ ಸಿಸ್ಟಮ್ಸ್ ಎಂಬ ಖೊಟ್ಟಿ ಸಂಸ್ಥೆಯಿಂದ ರಾಜ್ಯ ಅಥವಾ ಕೇಂದ್ರ ಸರ್ಕಾರದ ಡಿ.ಜಿ.ಎಸ್.ಡಿ.ಯಿಂದ ಅಂಗೀಕೃತಗೊಂಡ ದರಗುತ್ತಿಗೆ ಸಂಸ್ಥೆಗಳ ದರ ಪಟ್ಟಿಗಳನ್ನು ಪಡೆದು ಇವುಗಳಲ್ಲಿ ಈ ಸಾಮಗ್ರಿಗಳಿಗೆ ದರಗಳು ಹಾಗೂ ಪ್ರಮಾಣವನ್ನು ಆಯ್ಕೆ ಮಾಡಿ ಪ್ರಸ್ತಾವನೆ ಸಲ್ಲಿಸಲಾಗಿದೆಯೇ ಎಂಬ ಅಂಶಗಳನ್ನು ಖಚಿತಪಡಿಸಿಕೊಳ್ಳದೆ ಸಿಗ್ಮಾ ಸಂಸ್ಥೆ ಪ್ರತಿನಿಧಿಯೊಂದಿಗೆ ಶಾಮೀಲಾಗಿ ಕರ್ನಾಟಕ ಆರ್ಥಿಕ ಸಂಹಿತೆ ಮತ್ತು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಗಳು 1966ರ ನಿಯಮ 3ನ್ನು ಉಲ್ಲಂಘಿಸಿ ಆ ಸಂಸ್ಥೆಗೆ ಸರಬರಾಜು ಆದೇಶ ನೀಡಿ ಒಟ್ಟು ರೂ.1.25ಕೋಟಿ ಹಣ ಪಾವತಿಸಿರುವ ಮೂಲಕ ಸರ್ಕಾರಕ್ಕೆ ಸುಮಾರು ರೂ.60ಲಕ್ಷ ನಷ್ಟವುಂಟು ಮಾಡಿದ ಆರೋಪಕ್ಕೆ ಕಾರಣರಾಗಿ ತೀವ್ರ ದುರ್ನಡತೆ ಎಸಗಿರುವುದು ಕಂಡು ಬಂದಿರುವುದರಿಂದಲೂ,

ಮೇಲ್ಕಂಡ ದುರ್ನಡತೆಗಾಗಿ ಶ್ರೀ ಬಿ.ಜಿ. ದೇಸಾಯಿ, ನಿವೃತ್ತ ನಿರ್ದೇಶಕರು ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸಬೇಕೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಆದ್ದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಬಿ.ಜಿ. ದೇಸಾಯಿ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ಇಲಾಖಾ ವಿಚಾರಣೆ ನಡೆಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ವಿಚಾರಣೆಯಲ್ಲಿ ಸರ್ಕಾರವು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯ ನಿರ್ವಹಿಸತಕ್ಕದ್ದು ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11, 11-ಎರಲ್ಲಿ ನಿಗದಿ ಪಡಿಸಿರುವ ಕಾರ್ಯ ವಿಧಾನವನ್ನು ಅನುಸರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಚ್.ಆರ್. ನಾಗೇಂದ್ರ**

ಪಿ.ಆರ್.906

**ಸರ್ಕಾರದ ಅಧೀನ ಕಾರ್ಯದರ್ಶಿ,**

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).**

**ವಿಷಯ:** ಶ್ರೀ ಡಿ.ಬಸವರಾಜು, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ-ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರಿ ಆದೇಶ ಕ್ರಮಾಂಕ ಸಿಆಸುಇ 97 ಎಸ್‌ಇಎಸ್ 2003 ದಿನಾಂಕ 12.4.2004.
2. ಶ್ರೀ ಎಸ್.ಎಸ್.ಸಂಗೊಳ್ಳಿ, ನಿವೃತ್ತ ನ್ಯಾಯಾಧೀಶರು ಅವರ ವಿಚಾರಣಾ ವರದಿ ದಿನಾಂಕ 27.1.2005.
3. 2ನೇ ಕಾರಣ ಕೇಳುವ ಸೂಚನೆ ಸಂಖ್ಯೆ: ಸಿಆಸುಇ 97 ಎಸ್‌ಇಎಸ್ 2003 ದಿನಾಂಕ 9.3.2005.
4. ಶ್ರೀ ಡಿ.ಬಸವರಾಜು, ಕೆಎಎಸ್ ಅಧಿಕಾರಿ ಅವರ ಉತ್ತರ ದಿನಾಂಕ 7.4.2005.

**ಪ್ರಸ್ತಾವನೆ:**

ಬೆಂಗಳೂರು ಜಿಲ್ಲೆ, ಕೃಷ್ಣರಾಜಪುರ ನಗರಸಭೆ ವಾರ್ಡ್ ನಂ.15 ರಿಂದ 21ರವರೆಗಿನ ಚುನಾವಣಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಅಭ್ಯರ್ಥಿಯ ಸಹಿ ಇಲ್ಲದೆ ನೋಟರಿಯಿಂದ ದೃಡೀಕರಿಸಲ್ಪಟ್ಟ ಘೋಷಣಾ ಪತ್ರವನ್ನು ಆಕ್ಷೇಪಣಾ ನಡುವೆಯು ಸ್ವೀಕರಿಸಿ ನಾಮಪತ್ರವನ್ನು ಅಂಗೀಕರಿಸುವ ಮೂಲಕ ದುರ್ನಡತೆ ಎಸಗಿದ ಆರೋಪಕ್ಕಾಗಿ ಶ್ರೀ ಡಿ.ಬಸವರಾಜು, ಕೆಎಎಸ್ ಅಧಿಕಾರಿ ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ನಡೆಸಲು ಮೇಲೆ (1)ರಲ್ಲಿ ಓದಲಾದ ದಿನಾಂಕ 12.4.2004ರ ಆದೇಶದಲ್ಲಿ ನಿವೃತ್ತ ನ್ಯಾಯಾಧೀಶರಾದ ಶ್ರೀ ಎಸ್.ಎಸ್.ಸಂಗೊಳ್ಳಿ, ನಿವೃತ್ತ ನ್ಯಾಯಾಧೀಶರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆಯನ್ನು ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿನಾಂಕ 27.1.2005 ರಂದು ವಿಚಾರಣಾ ವರದಿಯನ್ನು ಸಲ್ಲಿಸಿ, ಬೆಂಗಳೂರು ಜಿಲ್ಲೆ ಕೃಷ್ಣರಾಜಪುರ ನಗರಸಭೆ ವಾರ್ಡ್ ನಂ.15 ರಿಂದ 21ರವರೆಗಿನ ಚುನಾವಣಾಧಿಕಾರಿಯಾಗಿ ಆಪಾದಿತ ಅಧಿಕಾರಿಯವರು ಕಾರ್ಯ ನಿರ್ವಹಿಸುತ್ತಿದ್ದಾಗ ಅಭ್ಯರ್ಥಿಯ ಸಹಿ ಇಲ್ಲದೆ ನೋಟರಿಯಿಂದ ದೃಡೀಕರಿಸಲ್ಪಟ್ಟ ಘೋಷಣಾ ಪತ್ರವನ್ನು ಆಕ್ಷೇಪಣಾ ನಡುವೆಯು ಸ್ವೀಕರಿಸಿ ನಾಮಪತ್ರವನ್ನು ಅಂಗೀಕರಿಸುವ ಮೂಲಕ ಎಸಗಿದ ಆರೋಪವು ರುಜುವಾತಾಗಿರುವುದಿಲ್ಲವೆಂಬ ನಿರ್ಣಯವನ್ನು ನೀಡಿರುತ್ತಾರೆ.

ವಿಚಾರಣಾಧಿಕಾರಿಯವರು ನೀಡಿದ ವಿಚಾರಣಾ ವರದಿಯನ್ನು ಪರಿಶೀಲಿಸಿದ ಸರ್ಕಾರವು ಚುನಾವಣಾ ಆಯೋಗವು ದಿನಾಂಕ 14.7.2003ರ ಸೂಚನೆಯಲ್ಲಿ ಚುನಾವಣಾಧಿಕಾರಿಗಳಾಗಿ ಕಾರ್ಯ ನಿರ್ವಹಿಸುವ ಅಧಿಕಾರಿಗಳು ಯಾವ ಯಾವ ಕರ್ತವ್ಯ ಗಳನ್ನು ನಿರ್ವಹಿಸಬೇಕು ಎಂಬುದನ್ನು ಸ್ಪಷ್ಟವಾಗಿ ತಿಳಿಸಿದೆ. ಅಭ್ಯರ್ಥಿಗಳು ಸಲ್ಲಿಸುವ ಪ್ರಮಾಣ ಪತ್ರವು ಅಭ್ಯರ್ಥಿಯ ಸಹಿ ಇಲ್ಲದೆ ಕೇವಲ ನೋಟರಿಯಿಂದ ಪ್ರಮಾಣೀಕೃತ ಗೊಂಡ ಮಾತ್ರಕ್ಕೆ ಅದು ಸಿಂಧುವಾಗುವುದಿಲ್ಲ ಎಂಬುದನ್ನು ಒಪ್ಪಲು ಸಾಧ್ಯವಿಲ್ಲ. ಚುನಾವಣಾ ಅಧಿಕಾರಿಯು ಪರಿಶೀಲಿಸಿ ನಿಯಮಗಳ ಪ್ರಕಾರ ಕ್ರಮ ಕೈಗೊಳ್ಳಬೇಕಾಗಿದ್ದರೂ ಆ ರೀತಿ ಮಾಡದೆ ಕರ್ತವ್ಯದಲ್ಲಿ ವಿಫಲರಾಗಿರುವ ಮೇರೆಗೆ ವಿಚಾರಣಾ ವರದಿಯನ್ನು ತಿರಸ್ಕರಿಸಲು ಉದ್ದೇಶಿಸಿ ಆಪಾದಿತರಿಗೆ ವಿಚಾರಣಾ ವರದಿಯ ಬಗ್ಗೆ ಹೇಳಿಕೆ ನೀಡಲು ಮೇಲೆ (3)ರಲ್ಲಿ ಓದಲಾದ ದಿನಾಂಕ 9.3.2005ರಲ್ಲಿ 2ನೇ ಕಾರಣ ಕೇಳುವ ನೋಟೀಸನ್ನು ನೀಡಲಾಗಿತ್ತು. ಅದಕ್ಕೆ ಅವರು ಮೇಲೆ (4)ರಲ್ಲಿ ಓದಲಾದ ದಿನಾಂಕ 7.4.2005ರಂದು ಮನವಿಯನ್ನು ಸಲ್ಲಿಸಿ, ಭಾರತ ಸಂವಿಧಾನದ ಮೇರೆಗೆ ರಚಿತವಾದ ಭಾರತ ಚುನಾವಣಾ ಆಯೋಗದಿಂದ ನೀಡಲಾಗಿರುವ ಚುನಾವಣಾಧಿ ಕಾರಿಗಳ ಕೈಪಿಡಿಯಲ್ಲಿ ನಾಮ ನಿರ್ದೇಶನ ಪತ್ರಗಳನ್ನು ಸಲ್ಲಿಸುವಾಗ ಪ್ರಮಾಣ ಪತ್ರ ಸಲ್ಲಿಸದೇ ಇದ್ದಲ್ಲಿ ಮಾತ್ರ ನಾಮ ನಿರ್ದೇಶನ ತಿರಸ್ಕರಿಸಲು ಅವಕಾಶವಿರುತ್ತದೆ. ಒಂದು ವೇಳೆ ಸಲ್ಲಿಸಿದ ಪ್ರಮಾಣ ಪತ್ರವು ಲೋಪಗಳಿಂದ ಕೂಡಿದ್ದರೆ ಅಥವಾ ತಪ್ಪು ವಿಚಾರ ಮಾಹಿತಿಗಳಿಂದ ಕೂಡಿದ್ದರೂ ಕೂಡ ಅಂತಹ ನಾಮ ನಿರ್ದೇಶನ ಪತ್ರಗಳನ್ನು ತಿರಸ್ಕರಿಸಬಾರದೆಂದು ನಿರ್ದೇಶನ ಇರುತ್ತದೆ. ನಾಮ ನಿರ್ದೇಶನದಾರರು ನೋಟರಿಯಿಂದ ಪ್ರಮಾಣೀಕರಿಸಿದ ಪ್ರಮಾಣ ಪತ್ರವನ್ನು ನಾಮ ನಿರ್ದೇಶನದೊಂದಿಗೆ ಸಲ್ಲಿಸಿದಾಗ ಆ ಪ್ರಮಾಣ ಪತ್ರದ ಪ್ರಾಮಾಣಿಕತೆ ಬಗ್ಗೆ ಪ್ರಶ್ನಿಸಲು ಚುನಾವಣಾಧಿಕಾರಿಗಳಿಗೆ ಯಾವುದೇ ಅಧಿಕಾರವಿರುವುದಿಲ್ಲ. ಈ ಬಗ್ಗೆ ತಾವು ಅರೆನ್ಯಾಯಿಕ ಅಧಿಕಾರಿಯಾಗಿ ವಿಚಾರಣೆ ನಡೆಸಿ ತೀರ್ಮಾನ ಕೈಗೊಂಡು ಅವರಿಗೆ ಹಿಂಬರಹ ನೀಡಲಾಗಿರುತ್ತದೆ. ಹೀಗಾಗಿ ಭಾರತದ ಚುನಾವಣಾ ಆಯೋಗವು ನೀಡಿರುವ ಚುನಾವಣಾಧಿಕಾರಿಗಳ ಕೈಪಿಡಿಯಲ್ಲಿನ ಅಂಶಗಳ ಹಿನ್ನೆಲೆಯಲ್ಲಿ ತಮ್ಮನ್ನು ಆರೋಪ ಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ವಿಚಾರಣಾಧಿಕಾರಿಯವರ ವರದಿ ಮತ್ತು ಆಪಾದಿತರು ನೀಡಿರುವ ಹೇಳಿಕೆಯನ್ನು ಮತ್ತೆ ಪರಿಶೀಲಿಸಲಾಗಿ ಇವರ ಹೇಳಿಕೆಯಲ್ಲಿ ಸಮರ್ಥನೀಯ ಕಾರಣಗಳಿಲ್ಲದಿರುವುದು ಕಂಡು ಬರುತ್ತದೆ. ಆಪಾದಿತರು ರಾಜ್ಯ ಚುನಾವಣಾ ಆಯೋಗದ ನಿರ್ದೇಶನದ ಮೇಲೆ ಹಾಗೂ ಈ ಆಯೋಗವು ಹೊರಡಿಸಿದ ಅಧಿಸೂಚನೆಗಳ ಪ್ರಕಾರ ನಗರಸಭೆ, ಪುರಸಭೆಗಳ ಚುನಾವಣಾ ಕಾರ್ಯವನ್ನು ಕೈಗೊಳ್ಳಬೇಕಿದ್ದು ಆಯೋಗದ ದಿನಾಂಕ 14.7.2003ರ ಆದೇಶದಲ್ಲಿ ಚುನಾವಣಾಧಿಕಾರಿಗಳು ಯಾವ ಕರ್ತವ್ಯವನ್ನು ನಿರ್ವಹಿಸಬೇಕೆಂದು ಸೂಚಿಸಲಾಗಿದೆ. ಅದರ ಪ್ರಕಾರ ಚುನಾವಣೆಗೆ ಸ್ಪರ್ಧಿಸುವ ಅಭ್ಯರ್ಥಿಯು ನಾಮಪತ್ರದ ಜೊತೆಯಲ್ಲಿ ಪ್ರಮಾಣ ಪತ್ರವನ್ನು ನಿಗದಿ ಪಡಿಸಿದ ನಮೂನೆಯಲ್ಲಿ ಘೋಷಣೆ ಪತ್ರದೊಂದಿಗೆ ಸಲ್ಲಿಸಬೇಕು. ಪ್ರಮಾಣ ಪತ್ರಕ್ಕೆ ಅಭ್ಯರ್ಥಿಯ ಸಹಿ ಇಲ್ಲದಿದ್ದಲ್ಲಿ ಅದು ಪ್ರಮಾಣ ಪತ್ರವಾಗುವುದಿಲ್ಲ (No Affidavit). ಸಹಿ ಇಲ್ಲದ ಪ್ರಮಾಣ ಪತ್ರವು ಸಿಂಧುವಾಗದೆ ಇರುವುದರಿಂದ ಅದನ್ನು ಪ್ರಮಾಣ ಪತ್ರವಲ್ಲವೆಂದು ಪರಿಗಣಿಸಬೇಕಾಗುತ್ತದೆ. ಆಪಾದಿತರು ಸಹಿ ಇಲ್ಲದ ನೋಟರಿಯಿಂದ ದೃಢೀಕರಿಸಲ್ಪಟ್ಟ ಪ್ರಮಾಣ ಪತ್ರವನ್ನು ಅಂಗೀಕರಿಸಿರುವುದು ಈ ಮೇರೆಗೆ ಲೋಪ ವಾಗಿದೆ. ಚುನಾವಣಾ ಆಯೋಗದ ಕೈಪಿಡಿಯಲ್ಲಿನ ಅಂಶಗಳ ಹಿನ್ನೆಲೆಯಲ್ಲಿ ಸೂಚನೆಗಳನ್ನು ಸ್ಪಷ್ಟವಾಗಿ ಅರ್ಥೈಸಿಕೊಳ್ಳದೆ ಗೊಂದಲದಿಂದ ಈ ಕ್ರಮವನ್ನು ಆಪಾದಿತರು ತೆಗೆದುಕೊಂಡಿರುವುದನ್ನು ಸರ್ಕಾರವು ಮನಗಂಡು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಕ್ರಮಾಂಕ ಸಿಆಸುಇ 97 ಎಸ್‌ಇಎನ್ 2003, ಬೆಂಗಳೂರು ದಿನಾಂಕ 23ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಶ್ರೀ ಡಿ. ಬಸವರಾಜು, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಇವರಿಗೆ ಎಚ್ಚರಿಕೆಯನ್ನು ನೀಡುವ ಮೂಲಕ ಅವರ ವಿರುದ್ಧ ಮಾಡಲಾದ ಆರೋಪಗಳಿಂದ ಅವರನ್ನು ಆರೋಪಮುಕ್ತರನ್ನಾಗಿಸುತ್ತದೆ.

ಈ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಆ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

ಪಿ.ಆರ್.923

**ವಿಷಯ:** ಶ್ರೀ ಮಾಜ್ ಅಹ್ಮದ್ ಷರೀಫ್ ಮತ್ತು ಶ್ರೀ ಎಂ.ಎ. ಖಾಲೀದ್, ಕೆಎಎಸ್ ಅಧಿಕಾರಿಗಳು ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ - ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಕ್ರಮಾಂಕ:ಸಿಆಸುಇ 58 ಎಸ್‌ಇಎನ್ 99 ದಿನಾಂಕ 21.6.2002.
2. ಶ್ರೀ ಬಿ.ಎನ್. ಶ್ರೀಧರ್, ಸರ್ಕಾರದ ಪ್ರಧಾನ ಕಾರ್ಯದರ್ಶಿ ಅವರ ದಿನಾಂಕ 22.2.2005ರ ವಿಚಾರಣಾ ವರದಿ.

**ಪ್ರಸ್ತಾವನೆ:**

ಶ್ರೀ ಮಾಜ್ ಅಹ್ಮದ್ ಷರೀಫ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರು ಕರ್ನಾಟಕ ವಕ್ಫ್ ಮಂಡಳಿಯ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಯಾಗಿ ಅದೇ ಅವಧಿಯಲ್ಲಿ ಶ್ರೀ ಎಂ.ಎ. ಖಾಲೀದ್, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರು ವಕ್ಫ್ ಸಚಿವರ ಆಪ್ತ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ವಕ್ಫ್ ಮಂಡಳಿಗೆ ಸೇರಿದ ಬೆಂಗಳೂರಿನ ರಿಚ್ಮಂಡ್ ಟೌನ್ ನೂರೀಸ್ ರಸ್ತೆಯ ನಂ.18ರ ಅರಬ್ ಲೈನ್ ಸುನ್ನಿ ಮಸೀದಿಯ ನಿವೇಶನವನ್ನು ಅವರ ಕುಟುಂಬದವರೇ ಪದಾಧಿಕಾರಿಗಳಾಗಿರುವ "ಟಿಪ್ಪು ಸುಲ್ತಾನ್ ಷಾಹೀದ್ ಫೌಂಡೇಶನ್`` ಎಂಬ ಸಂಸ್ಥೆಗೆ ಕಾನೂನು ಬಾಹಿರವಾಗಿ ಅತ್ಯಂತ ಕಡಿಮೆ ಬೆಲೆಗೆ ವರ್ಗಾವಣೆ ಮಾಡಿಕೊಡಲು ಏಕ ಪಕ್ಷೀಯವಾಗಿ ತೀರ್ಮಾನಿಸಿ ಅಧಿಕಾರ ದುರುಪಯೋಗಪಡಿಸಿಕೊಂಡ ಮತ್ತು ಸರ್ಕಾರದ ಅನುಮತಿಯನ್ನು ಪಡೆಯದೇ ಸದರಿ ಲಾಭದಾಯಕ ಫೌಂಡೇಶನ್ ಟ್ರಸ್ಟ್‌ನ ಪದಾಧಿಕಾರಿಯಾಗಿರುತ್ತಾರೆಂಬ ಆರೋಪದ ಸಂಬಂಧ ವಿಚಾರಣೆ ಮಾಡಲು ಮೇಲೆ ಓದಲಾದ (1)ರ ದಿನಾಂಕ 21.6.2002ರ ಆದೇಶದಲ್ಲಿ ಶ್ರೀ ಬಿ.ಎನ್. ಶ್ರೀಧರ್, ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಾರಿಗೆ ಇಲಾಖೆ ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ ಓದಲಾದ (2)ರ ದಿನಾಂಕ 22.2.2005ರ ವಿಚಾರಣಾ ವರದಿಯನ್ನು ಸಲ್ಲಿಸಿ ಶ್ರೀ ಮಾಜ್ ಅಹ್ಮದ್ ಷರೀಫ್ ಮತ್ತು ಎಂ.ಎ. ಖಾಲೀದ್ ಅವರುಗಳ ಮೇಲೆ ಹೊರಿಸಲಾದ ಆರೋಪಗಳು ಸಾಬೀತಾಗಿರುವುದಿಲ್ಲವೆಂಬ ನಿರ್ಣಯವನ್ನು ನೀಡಿರುತ್ತಾರೆ.

ವಿಚಾರಣಾಧಿಕಾರಿಯವರ ವರದಿಯನ್ನು ಪರಿಶೀಲಿಸಲಾಯಿತು. ಆಪಾದಿತರು ಸದರಿ ಸ್ವತ್ತಿನ ಲೀಸ್‌ನಿಂದ ಹೇಗೆ ಲಾಭ ಪಡೆಯುತ್ತಾರೆ ಎಂಬುದನ್ನು ಶಿಸ್ತು ಪ್ರಾಧಿಕಾರಿಯು ಋಜುವಾತು ಪಡಿಸಲು ವಿಫಲವಾಗಿದೆ ಎಂದು ತಿಳಿಸಿರುತ್ತಾರೆ. ಆದ್ದರಿಂದ ಆರೋಪಿತರು ಅವರ ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡಿರುತ್ತಾರೆಂಬುದಕ್ಕೆ ಸಾಕ್ಷ್ಯಾಧಾರಗಳು ಇಲ್ಲವೆಂದು ತಿಳಿಸಿರುತ್ತಾರೆ. ತದ್ವಿರುದ್ಧವಾಗಿ ಲಭ್ಯವಿರುವ ಸಾಕ್ಷ್ಯಾಧಾರಗಳ ಪ್ರಕಾರ ಉಪ ಸಮಿತಿಯು ಸ್ಥಳ ತನಿಖೆ ಮಾಡಿ ಸದರಿ ಸಮಿತಿಯ ಶಿಫಾರಸ್ಸುಗಳನ್ನು ವಕ್ಫ್ ಬೋರ್ಡ್ ಮಂಡಳಿ ಅನುಮೋದಿಸಿರುವುದರಿಂದ ಸದರಿ ಆಪಾದಿತರು ಈ ನಿರ್ಣಯಕ್ಕೆ ಯಾವುದೇ ರೀತಿಯಲ್ಲಿ ಪ್ರಭಾವವನ್ನು ಬೀರಿಲ್ಲವೆಂದೇ ತೋರಿಸುತ್ತದೆ ಎಂದು ತಿಳಿಸಿರುತ್ತಾರೆ ಹಾಗೂ ಮಂಡನಾಧಿಕಾರಿಯು ಹಜರತ್ ಟಿಪ್ಪು ಸುಲ್ತಾನ್ ಷಾಹಿದ್ ಫೌಂಡೇಶನ್ ಟ್ರಸ್ಟನ್ನು ಲಾಭದಾಯಕ ಸಂಸ್ಥೆ ಎಂದು ಋಜುವಾತುಪಡಿಸಲು ವಿಫಲರಾಗಿದ್ದಾರೆಂದು ಮತ್ತು ಅಪರ ಸಿ.ಇ.ಓ., ವಕ್ಫ್ ಬೋರ್ಡ್ ಅವರ ಸಾಕ್ಷ್ಯಾಧಾರದಲ್ಲಿ ಸದರಿ ಸಂಸ್ಥೆಯು ಧಾರ್ಮಿಕ ಟ್ರಸ್ಟ್ ಎಂದು ಅದರ ಮುಖ್ಯ ಗುರಿಯು ಶಿಕ್ಷಣ ಸಂಸ್ಥೆಯನ್ನು ನಡೆಸುವುದು ಮಾತ್ರ ಎಂದು ತಿಳಿದು ಬರುತ್ತದೆಂದು ವಿಚಾರಣಾ ವರದಿಯು ತಿಳಿಸುತ್ತದೆ. ಆದ್ದರಿಂದ ಸದರಿ ಸಂಸ್ಥೆಯು ಲಾಭದಾಯಕ ಸಂಸ್ಥೆ ಎಂದು ಪರಿಗಣಿಸಲು ಯಾವುದೇ ಆಧಾರವಿಲ್ಲವೆಂದು ಹಾಗೂ ಆಪಾದಿತರು ಅವರ ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡು ದುರುದ್ದೇಶದಿಂದ ಪರೋಕ್ಷವಾಗಿ ಸದರಿ ಸ್ವತ್ತನ್ನು ವಶ ಪಡಿಸಿಕೊಳ್ಳಲು ಪ್ರಯತ್ನಿಸಿದ್ದಾರೆಂಬ ಆರೋಪವು ಸಹ ನಿರಾಧಾರವೆಂದು ವರದಿಯು ತಿಳಿಸುತ್ತದೆ.

ಮೇಲ್ಕಂಡ ವರದಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ. ಶ್ರೀ ಮಾಜ್ ಅಹ್ಮದ್ ಷರೀಫ್, ಕೆಎಎಸ್ ಅವರು ಹಜರತ್ ಟಿಪ್ಪು ಸುಲ್ತಾನ್ ಷಾಹಿದ್ ಫೌಂಡೇಶನ್ ಸಂಸ್ಥೆಯ ಅಧ್ಯಕ್ಷರು ಮತ್ತು ಶ್ರೀ ಎಂ.ಎ. ಖಾಲೀದ್, ಕೆಎಎಸ್ ರವರೂ ಸಹ ಸದರಿ ಸಂಸ್ಥೆಯ ಸ್ಥಾಪಕ ಟ್ರಸ್ಟಿ. ಈ ಸಂಸ್ಥೆಯನ್ನು ಧಾರ್ಮಿಕ ಸಂಸ್ಥೆಯೆಂದು ಋಜುವಾತು ಪಡಿಸಿಲ್ಲ. ಧಾರ್ಮಿಕ ಕಾರ್ಯಗಳಲ್ಲಿ ಭಾಗವಹಿಸುವುದು ಒಂದು ವಿಷಯವಾದರೆ ಅಂತಹ ಸಂಸ್ಥೆಗಳನ್ನು ಸ್ಥಾಪಿಸುವ ಮೊದಲು ಆಪಾದಿತರು ಸರ್ಕಾರದ ಅನುಮತಿ ಪಡೆಯಬೇಕಾಗಿತ್ತು. ಈ ಆಪಾದಿತರು ಹಿತಾಸಕ್ತಿಯುಳ್ಳ ಟ್ರಸ್ಟಿಗಳಾಗಿ ರುವುದರಿಂದ ಮಂಡಳಿಯ ಇಂತಹ ವಿಷಯಗಳು ವಕ್ಫ್ ಬೋರ್ಡ್‌ಗಳಲ್ಲಿ ಚರ್ಚೆಗೆ ಬಂದಾಗ ನಿರ್ಧಾರಗಳಿಂದ ದೂರವಿರಬೇಕಾಗಿತ್ತು. ಈ ರೀತಿ ಅವರು ಮಾಡಿಲ್ಲ. ಹಜರತ್ ಟಿಪ್ಪು ಸುಲ್ತಾನ್ ಷಾಹಿದ್ ಫೌಂಡೇಶನ್‌ಗೆ ಒಂದು ಎಂ.ಓ.ಯು.ನ್ನು ಸಹಿ ಮಾಡಿ ಸದರಿ ಸ್ವತ್ತನ್ನು 60 ವರ್ಷಗಳಿಗೆ ಲೀಸ್ ನೀಡಿರುವುದು ವಕ್ಫ್ ಕಾಯ್ದೆಗೆ ವಿರುದ್ಧವಾಗುತ್ತದೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 58 ಎಸ್‌ಇಎನ್ 99, ಬೆಂಗಳೂರು ದಿನಾಂಕ 25ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಈ ಕೆಳಕಂಡ ಷರತ್ತಿಗೊಳಪಟ್ಟು ಶ್ರೀ ಮಾಜ್ ಅಹಮದ್ ಷರೀಫ್ ಮತ್ತು ಶ್ರೀ ಎಂ.ಎ. ಖಾಲೀದ್, ಕೆಎಎಸ್ ಅಧಿಕಾರಿಗಳ ವಿರುದ್ಧದ ವಿಚಾರಣೆಯನ್ನು ಮುಕ್ತಾಯಗೊಳಿಸಲು ಆದೇಶಿಸಿದೆ:

1. ಆಪಾದಿತರು ಅವರು ಸರ್ಕಾರಿ ಸೇವೆಯಲ್ಲಿರುವಾಗ ಇಂತಹ ಟ್ರಸ್ಟ್ ಮತ್ತು ಇತರೆ ಸಂಸ್ಥೆಗಳಿಂದ ಸಂಪರ್ಕ ಕಡಿದುಕೊಳ್ಳುವುದು.
2. ಭವಿಷ್ಯದಲ್ಲಿ ಸರ್ಕಾರಿ ನೌಕರರಿಗೆ ಅನ್ವಯವಾಗುವ ನಿಯಮ ಮತ್ತು ನಿಯಮಾವಳಿಗಳಿಗೆ ವಿಧೇಯರಾಗಿ ಜಾಗರೂಕತೆಯಿಂದ ಇರಲು ಮುಂಜಾಗರೂಕತೆ ವಹಿಸಲು ಇವರುಗಳಿಗೆ ಎಚ್ಚರಿಕೆಯನ್ನು ನೀಡಲಾಗಿದೆ.

ಈ ಪ್ರಕರಣಕ್ಕೆ ಸೀಮಿತಗೊಂಡಂತೆ ಮೇಲ್ಕಂಡ ವಿಚಾರಣೆ ನಡೆಯದಿದ್ದಲ್ಲಿ ಇವರು ಯಾವ ಸೌಲಭ್ಯಗಳಿಗೆ ಅರ್ಹರಿದ್ದರೋ ಆ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

ಪಿ.ಆರ್.924

**ವಿಷಯ:** ಶ್ರೀ ಎಂ. ಕೃಷ್ಣ, ಕೆಎಎಸ್(ಆಯ್ಕೆ ಶ್ರೇಣಿ) ಅಧಿಕಾರಿ, ಅವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂಖ್ಯೆ: ಸಿಆಸುಇ 76 ಎಸ್‌ಇಎನ್ 2004 ದಿನಾಂಕ 1.10.2004.
2. ಶ್ರೀ ಎಂ. ಕೃಷ್ಣ, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಅವರ ಲಿಖಿತ ಉತ್ತರ ದಿನಾಂಕ 7.5.2005.

**ಪ್ರಸ್ತಾವನೆ:**

ತುಮಕೂರು ಜಿಲ್ಲಾ ತರಬೇತಿ ಸಂಸ್ಥೆಯ ಪ್ರಾಚಾರ್ಯರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ 2004ರಲ್ಲಿ ಸಾರ್ವತ್ರಿಕ ಚುನಾವಣೆಯ ಅಂಗವಾಗಿ ಅವರನ್ನು ಸಹಾಯಕ ಚುನಾವಣಾ ಅಧಿಕಾರಿಯಾಗಿ ನೇಮಕ ಮಾಡಿದ್ದರೂ ಸದರಿ ಕರ್ತವ್ಯವನ್ನು ನಿರ್ವಹಿಸದೆ, ಬೇಜವಾಬ್ದಾರಿಯಿಂದ ರಜೆಯನ್ನು ಮಂಜೂರು ಮಾಡಿಸಿಕೊಳ್ಳದೆ ಗೈರು ಹಾಜರಾಗಿರುವ ದುರ್ನಡತೆಯ ಸಂಬಂಧ ಶ್ರೀ ಎಂ. ಕೃಷ್ಣ, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಅವರಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ 1.10.2004ರ ನೋಟೀಸನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರನ್ವಯ ಜಾರಿ ಮಾಡುವುದರ ಮೂಲಕ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಈ ನೋಟೀಸಿಗೆ ಆರೋಪಿತರು ಮೇಲೆ (2)ರಲ್ಲಿ ಓದಲಾದ ದಿನಾಂಕ 7.5.2005ರ ಉತ್ತರ ಸಲ್ಲಿಸಿ ತಮ್ಮ ಮೇಲೆ ಮಾಡಲಾದ ಆರೋಪಗಳನ್ನು ಸಾರಸಗಟಾಗಿ ತಿರಸ್ಕರಿಸುತ್ತಾರೆ. ಅವರು ಸಲ್ಲಿಸಿದ ತಮ್ಮ ಉತ್ತರದಲ್ಲಿ ಮನಗಾಣುವಂತಹ ಅಂಶಗಳು ಇಲ್ಲದೆ ಇರುವುದರಿಂದ ಅವರ ವಿರುದ್ಧದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರೆಸಲು ತೀರ್ಮಾನಿಸಿರುವ ಹಿನ್ನೆಲೆಯಲ್ಲಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 76 ಎಸ್‌ಇಎನ್ 2004 ದಿನಾಂಕ 23ನೇ ಜೂನ್ 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಂ. ಕೃಷ್ಣ, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ವಿಚಾರಣೆ ನಡೆಸುವ ಸಲುವಾಗಿ ಶ್ರೀ ಜಿ. ನಂದಕುಮಾರ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ಕಾರ್ಯಕ್ಕಾಗಿ ಅವರು ಸರ್ಕಾರಿ ಆದೇಶ ಕ್ರಮಾಂಕ ಸಿಆಸುಇ 3 ಸೇಇವಿ 96 ದಿನಾಂಕ 24.4.98 ಹಾಗೂ ಸಿಆಸುಇ 45 ಸೇಇವಿ 2001 ದಿನಾಂಕ 4.3.2002ರಲ್ಲಿ ನಿಗದಿ ಪಡಿಸಿರುವಂತೆ ಗೌರವ ಧನ ಹಾಗೂ ಪ್ರಯಾಣ ಭತ್ಯೆ ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ತುಮಕೂರು ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ವಿಚಾರಣೆಯನ್ನು ಬೆಂಗಳೂರಿನಲ್ಲಿ ನಡೆಸಲು ಅಗತ್ಯ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಬೆಂಗಳೂರು ನಗರ ಜಿಲ್ಲಾಧಿಕಾರಿ ಗಳು ಅವರು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

ಪಿ.ಆರ್.930

**ವಿಷಯ:** ಶ್ರೀ ಎಸ್.ಎಸ್. ಪಟ್ಟಣ ಶೆಟ್ಟಿ, ಕೆಎಎಸ್ ಇವರು ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಉಪ ಆಯುಕ್ತರಾಗಿದ್ದಾಗ ಸಮವಸ್ತ್ರ ಸೀರೆಗಳು, ಟವೆಲ್‌ಗಳು ಇತ್ಯಾದಿಗಳನ್ನು ಖರೀದಿಸುವಲ್ಲಿ ನಡೆದಿರುವ ಅವ್ಯವಹಾರಗಳ ಬಗ್ಗೆ ವಿಚಾರಣೆಯನ್ನು ಸನ್ಮಾನ್ಯ ಲೋಕಾಯುಕ್ತರವರಿಗೆ ವಹಿಸುವ ಬಗ್ಗೆ.

**ಓದಲಾಗಿದೆ:** ನಗರಾಭಿವೃದ್ಧಿ ಇಲಾಖೆಗೆ ಲೋಕಾಯುಕ್ತ ನಿಬಂಧಕರು ಬರೆದ ಪತ್ರ ಸಂಖ್ಯೆ:ಕಂಪ್ಲೆಂಟ್/ಲೋಕ್/ಬಿಸಿಡಿ-20/2000-01 ದಿನಾಂಕ 7.2.2005.

**ಪ್ರಸ್ತಾವನೆ:**

ಶ್ರೀ ಎಸ್.ಎಸ್. ಪಟ್ಟಣ ಶೆಟ್ಟಿ, ಕೆಎಎಸ್ ಅಧಿಕಾರಿ 1996-97ರ ಅವಧಿಯಲ್ಲಿ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಉಪ ಆಯುಕ್ತರು (ಆಡಳಿತ) ಹುದ್ದೆಯಲ್ಲಿ ಮತ್ತು ಶ್ರೀ ಹೆಚ್.ಎಸ್. ಆನಂದ ಮೂರ್ತಿ, ಹಿಂದಿನ ಉಪ ಆಯುಕ್ತರು, ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಸಮವಸ್ತ್ರ ಸೀರೆಗಳು, ಟವಲ್‌ಗಳು ಇತ್ಯಾದಿ ಸಾಮಗ್ರಿಗಳನ್ನು ಖರೀದಿಸುವಲ್ಲಿ ಅವ್ಯವಹಾರ ನಡೆದಿದೆ ಎಂಬ ದೂರಿನ ಮೇರೆಗೆ ಲೋಕಾಯುಕ್ತರು ತನಿಖೆಯನ್ನು ನಡೆಸಿರುತ್ತಾರೆ. ಈ ತನಿಖೆಯಲ್ಲಿ ಶ್ರೀ ಪಟ್ಟಣ ಶೆಟ್ಟಿ, ಕೆಎಎಸ್ ಅಧಿಕಾರಿರವರು ಒಟ್ಟು ರೂ.140 ಲಕ್ಷಗಳ ಸಮವಸ್ತ್ರ ಹಾಗೂ ಇತರೆ ಸಾಮಗ್ರಿಗಳನ್ನು ಖರೀದಿಸಿರುತ್ತಾರೆಂದು, ವಾಸ್ತವವಾಗಿ ಪಾರದರ್ಶಕತೆಯಿಂದ ಖರೀದಿ ನಿಯಮಗಳನ್ನು ಪಾಲಿಸಿದ್ದಲ್ಲಿ ಸದರಿ ಸಾಮಗ್ರಿಗಳನ್ನು ಸುಮಾರು ರೂ.50 ಲಕ್ಷಕ್ಕೆ ಖರೀದಿಸಬಹುದಾಗಿತ್ತೆಂದು, ಆದ್ದರಿಂದ ಇವರಿಂದ ಸರ್ಕಾರಕ್ಕೆ ಸುಮಾರು ರೂ.85 ಲಕ್ಷ ನಷ್ಟ ಉಂಟು ಮಾಡಲು ಕಾರಣರಾಗಿರುತ್ತಾರೆಂದು ತಿಳಿಸಿರುತ್ತಾರೆ. ಇನ್ನೊಬ್ಬ ಆರೋಪಿತರಾದ ಶ್ರೀ ಹೆಚ್.ಎಸ್. ಆನಂದ ಮೂರ್ತಿರವರು ಮರಣ ಹೊಂದಿರುತ್ತಾರೆಂದು ಸಹ ವರದಿಯನ್ನು ನೀಡಿರುತ್ತಾರೆ. ಆದ್ದರಿಂದ ಈ ಬಗ್ಗೆ ಲೋಕಾಯುಕ್ತ ಕಾಯ್ದೆ 12(4)ರಡಿ ಸಕ್ಷಮ ಪ್ರಾಧಿಕಾರವು ಶ್ರೀ ಎಸ್.ಎಸ್. ಪಟ್ಟಣ ಶೆಟ್ಟಿಯವರ ವಿರುದ್ಧ ಕ್ರಮ ತೆಗೆದುಕೊಳ್ಳಲು ಉಲ್ಲೇಖದ ಪತ್ರದಲ್ಲಿ ಲೋಕಾಯುಕ್ತರವರು ಕೋರಿದ್ದಾರೆ. ಸದರಿ ತನಿಖಾ ವರದಿಯನ್ನು ಮೇಲೆ ಉಲ್ಲೇಖದಲ್ಲಿ ಓದಲಾದ ಪತ್ರದಲ್ಲಿ ಕಳುಹಿಸುತ್ತಾ ಲೋಕಾಯುಕ್ತ ಕಾಯ್ದೆ 12(3)ರಡಿ ಸರ್ಕಾರಕ್ಕೆ ವರದಿ ಮಾಡಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಆರೋಪಿತರ ವಿರುದ್ಧದ ದೂರುಗಳು ಮೇಲ್ನೋಟಕ್ಕೆ ಸತ್ಯವೆಂದು ಕಂಡು ಬರುವುದರಿಂದಲೂ ಮತ್ತು ಈ ದುರ್ನಡತೆಯಿಂದ ಸರ್ಕಾರಕ್ಕೆ ಲಕ್ಷಾಂತರ ನಷ್ಟವುಂಟಾಗಿರುವುದರಿಂದಲೂ ಪ್ರಕರಣದ ಪೂರ್ಣ ಪ್ರಮಾಣದ ವಿಚಾರಣೆಯನ್ನು ಮಾಡುವ ಅವಶ್ಯಕತೆಯಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 41 ಎಸ್‌ಇಎನ್ 2005, ಬೆಂಗಳೂರು ದಿನಾಂಕ: 23ನೇ ಜೂನ್, 2005**

ಶ್ರೀ ಎಸ್.ಎಸ್. ಪಟ್ಟಣ ಶೆಟ್ಟಿ, ಕೆಎಎಸ್ ಅಂದಿನ ಉಪ ಆಯುಕ್ತರು, ಬೆಂಗಳೂರು ಮಹಾನಗರ ಪಾಲಿಕೆ ಇವರು 1996-97ರ ಅವಧಿಯಲ್ಲಿ ಸಮವಸ್ತ್ರ ಇತ್ಯಾದಿ ಸಾಮಗ್ರಿಗಳನ್ನು ನಿಯಮಗಳನ್ನು ಪಾಲಿಸದೇ ಖರೀದಿಸಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿರುವ ಪ್ರಕರಣದ ಕುರಿತು ಪೂರ್ಣ ಪ್ರಮಾಣದ ವಿಚಾರಣೆಯನ್ನು ಕೆ.ಸಿ.ಎಸ್ (ಸಿಸಿಎ) ನಿಯಮ 14-ಎ ರಡಿ ಲೋಕಾಯುಕ್ತರ ಮೂಲಕ ನಡೆಸಲು ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

ಪಿ.ಆರ್.931

**ವಿಷಯ:** ಶ್ರೀ ಜೆ.ಕೆ. ಪಾಟೀಲ್, ನಿವೃತ್ತ ಮುಖ್ಯ ಇಂಜಿನಿಯರ್ ರವರ ವಿರುದ್ಧ ಇಲಾಖಾ ವಿಚಾರಣೆ - ದಂಡನೆ ವಿಧಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ನೋಟೀಸ್ ಸಂಖ್ಯೆ:ಸಿಆಸುಇ 47 ಎಸ್‌ಇಎನ್ 03 ದಿನಾಂಕ 4.9.2003.
2. ಸರ್ಕಾರದ 2ನೇ ಕಾರಣ ಕೇಳಿ ನೋಟೀಸ್ ಸಂಖ್ಯೆ:ಸಿಆಸುಇ 47 ಎಸ್‌ಇಎನ್ 03 ದಿನಾಂಕ 22.11.2004.
3. ಶ್ರೀ ಜೆ.ಕೆ. ಪಾಟೀಲ್‌ರವರ ದಿನಾಂಕ 17.1.05ರ ಲಿಖಿತ ಉತ್ತರ
4. ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ, ಬೆಂಗಳೂರು ರವರ ಪತ್ರ ಸಂಖ್ಯೆ:ಪಿಎಸ್‌ಸಿ 183 ಸಿಎನ್‌ಎಸ್ 04 ದಿನಾಂಕ 20.4.05.

**ಪ್ರಸ್ತಾವನೆ:**

ಶ್ರೀ ಜೆ.ಕೆ. ಪಾಟೀಲ್, ನಿವೃತ್ತ ಮುಖ್ಯ ಇಂಜಿನಿಯರ್‌ರವರು ಹಿಂದೆ, 1988-89ರ ಅವಧಿಯಲ್ಲಿ ರಾಷ್ಟ್ರೀಯ ಹೆದ್ದಾರಿ ಉಪ ವಿಭಾಗ, ಹಾವೇರಿಯಲ್ಲಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಇಬ್ಬರು ಡಿಪ್ಲೋಮಾ ಇಂಜಿನಿಯರ್‌ಗಳನ್ನು ಸರ್ಕಾರದ ಸೂಚನೆಗಳಿಗೆ ವಿರುದ್ಧವಾಗಿ ನೇಮಕ ಮಾಡಿಕೊಂಡಿರುವ ಬಗ್ಗೆ ಇವರಿಗೆ ನಿಯಮ 12ರಡಿ ಮೇಲೆ (1)ರಲ್ಲಿ ಓದಲಾದ ದಿನಾಂಕ 4.9.2003ರ ನೋಟೀಸನ್ನು ಜಾರಿ ಮಾಡಲಾಗಿತ್ತು. ಈ ನೋಟೀಸನ್ನು ಆರೋಪಿತ ಅಧಿಕಾರಿಯು ದಿನಾಂಕ 21.10.2003ರಂದು ಸ್ವೀಕರಿಸಿರುತ್ತಾರೆ. ಇವರು ತದನಂತರ ದಿನಾಂಕ 30.6.2004ರಂದು ವಯೋ ನಿವೃತ್ತಿ ಹೊಂದಿರುತ್ತಾರೆ.

ಶ್ರೀಯುತ ಜೆ.ಕೆ. ಪಾಟೀಲ್‌ರವರು ದಿನಾಂಕ 21.10.2003ರಂದೇ ನೋಟೀಸನ್ನು ಪಡೆದಿದ್ದರೂ ಸಹ ಸರ್ಕಾರಕ್ಕೆ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿರಲಿಲ್ಲ. ಆದುದರಿಂದ ಕೆ.ಸಿ.ಎಸ್.ಆರ್.ನ ನಿಯಮ 214ರಡಿ ಮೇಲೆ (2)ರಲ್ಲಿ ಓದಲಾದ ದಿನಾಂಕ 22.11.2004ರಂದು 2ನೇ ಕಾರಣ ಕೇಳಿ ನೋಟೀಸನ್ನು ನೀಡಲಾಗಿದ್ದು ಈ ಬಗ್ಗೆ ಆರೋಪಿತ ಅಧಿಕಾರಿಗಳು ಲಿಖಿತ ಉತ್ತರ ಸಲ್ಲಿಸಿ ತುರ್ತು ಕಾಮಗಾರಿಗಳ ದೃಷ್ಟಿಯಿಂದ ಇಬ್ಬರು ದಿನಗೂಲಿ ನೌಕರರನ್ನು ನೇಮಿಸಿಕೊಳ್ಳಲಾಗಿತ್ತೆಂದು ಸದರಿ ನೌಕರರು ಈಗ ಕ್ರಮಬದ್ಧವಾಗಿದ್ದಾರೆಂದು ಹಾಗೂ

ಇಂತಹ ಪ್ರಕರಣಗಳಲ್ಲಿ ಅಧಿಕಾರಿಗಳು ನಿವೃತ್ತರಾಗಿದ್ದರೆ, ಅವರ ಮೇಲಿನ ಶಿಸ್ತು ಕ್ರಮವನ್ನು ಕೈಬಿಡಬೇಕೆಂದು ಲೋಕೋಪಯೋಗಿ ಇಲಾಖೆಯಲ್ಲಿ ನಿರ್ಣಯವಾಗಿದೆ ಎಂದು ತಿಳಿಸುತ್ತಾ ತಮ್ಮ ಮೇಲಿನ ಕ್ರಮವನ್ನು ಕೈಬಿಡಲು ಕೋರಿದ್ದಾರೆ.

ಈ ಬಗ್ಗೆ ಪರಿಶೀಲಿಸಲಾಗಿ ದಿನಗೂಲಿ ನೌಕರರ ನೇಮಕಾತಿಯನ್ನು ದಿನಾಂಕ 1.7.1984ರಿಂದಲೇ ನಿಷೇದಿಸಲಾಗಿದ್ದರೂ ಸಹ 1988-89ರ ಅವಧಿಯಲ್ಲಿ ದಿನಗೂಲಿ ನೌಕರರನ್ನು ಸರ್ಕಾರದ ಸೂಚನೆಗಳಿಗೆ ವಿರುದ್ಧವಾಗಿ ನೇಮಕ ಮಾಡಿರುವುದು ಲೋಪವಾಗಿರುತ್ತದೆ. ಈ ಅಧಿಕಾರಿಯವರು ಸೇವೆಯಲ್ಲಿರುವಾಗಲೇ ಶಿಸ್ತು ಕ್ರಮವನ್ನು ಪ್ರಾರಂಭಿಸಿರುವುದರಿಂದ, ಶ್ರೀಯುತರ ಸಮಜಾಯಿಷಿಯಲ್ಲಿ ತಿಳಿಸಿರುವ ಲೋಕೋಪಯೋಗಿ ಇಲಾಖೆಯ ನಿರ್ಣಯವು ಇವರಿಗೆ ಅನ್ವಯಿಸಲು ಬರುವುದಿಲ್ಲ. ಆದ್ದರಿಂದ ಇವರ ಮನವಿಯಲ್ಲಿ ಯಾವುದೇ ಸಮರ್ಥನೀಯ ಕಾರಣಗಳಿಲ್ಲದಿರುವುದನ್ನು ಮನಗಂಡ ಸರ್ಕಾರವು ಆರೋಪವು ಸಾಬೀತಾಗಿದೆ ಎಂದು ಪರಿಗಣಿಸಿ ದಂಡನೆ ವಿಧಿಸುವ ಸಲುವಾಗಿ ಮೇಲೆ (4)ರಲ್ಲಿ ಓದಲಾದ ದಿನಾಂಕ 20.4.2005ರ ಲೋಕ ಸೇವಾ ಆಯೋಗದ ಸಹಮತಿಯೊಂದಿಗೆ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 47 ಎಸ್‌ಇಎನ್ 2003 ಬೆಂಗಳೂರು, ದಿನಾಂಕ 23ನೇ ಜೂನ್, 2005**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು, ಶ್ರೀ ಜಿ.ಕೆ. ಪಾಟೀಲ್, ನಿವೃತ್ತ ಮುಖ್ಯ ಇಂಜಿನೀಯರ್ ಅವರ ನಿವೃತ್ತಿ ವೇತನದಿಂದ ಮಾಸಿಕ ರೂ.1000/- (ಒಂದು ಸಾವಿರ ರೂಪಾಯಿಗಳು) ಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ 2 ವರ್ಷಗಳ (ಎರಡು) ಅವಧಿಗೆ ಕಡಿತ ಗೊಳಿಸಲು ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಚ್.ಆರ್. ನಾಗೇಂದ್ರ**

ಪಿ.ಆರ್.932

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಶ್ರೀ ಎಂ.ಬಿ. ವೆಂಕಟರೆಡ್ಡಿ, ನಿವೃತ್ತ ಮುಖ್ಯ ಇಂಜಿನಿಯರ್ ಅವರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಸಂಖ್ಯೆ:ಸಿಆಸುಇ 113 ಎಸ್‌ಇಎನ್ 2003 ದಿನಾಂಕ 26.4.2005.
2. ಶ್ರೀ ಎಂ.ಬಿ. ವೆಂಕಟರೆಡ್ಡಿ ಅವರ ದಿನಾಂಕ 3.6.2005ರ ಲಿಖಿತ ಉತ್ತರ.

**ಪ್ರಸ್ತಾವನೆ:**

ಶ್ರೀ ಎಂ.ಬಿ. ವೆಂಕಟರೆಡ್ಡಿ, ನಿವೃತ್ತ ಮುಖ್ಯ ಇಂಜಿನಿಯರ್‌ರವರು ಅಧೀಕ್ಷಕ ಅಭಿಯಂತರರಾಗಿದ್ದಾಗ ಅವರ ಬಡ್ತಿ ವಿಷಯದಲ್ಲಿ ಶ್ರೀ ಎಸ್. ಸೆಲ್ವಕುಮಾರ್, ಉಪ ಕಾರ್ಯದರ್ಶಿ, ಸಿಆಸುಇ (ಸೇವೆಗಳು), ವಿಧಾನ ಸೌಧ ಇವರಿಗೆ ಹಣದ ಆಮಿಷೆ ತೋರಿಸಿದರೆನ್ನಲಾದ ಆರೋಪಕ್ಕಾಗಿ ಶ್ರೀ ಎಂ.ಬಿ. ವೆಂಕಟರೆಡ್ಡಿ ಇವರಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ 26.4.2005ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ 3.6.2005ರ ಉತ್ತರ ಸಲ್ಲಿಸಿದ ಆರೋಪಿತ ಅಧಿಕಾರಿಯು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 113 ಎಸ್‌ಇಎನ್ 2003, ಬೆಂಗಳೂರು ದಿನಾಂಕ 29ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೆ.ಸಿ.ಎಸ್.ಆರ್ ನಿಯಮ 214ರಡಿ ಶ್ರೀ ಎಂ.ಬಿ. ವೆಂಕಟರೆಡ್ಡಿ, ನಿವೃತ್ತ ಮುಖ್ಯ ಇಂಜಿನಿಯರ್‌ರವರ ವಿರುದ್ಧ ಆರೋಪಗಳ ಕುರಿತು ವಿಚಾರಣೆಯನ್ನು ನಡೆಸಲು ಸರ್ಕಾರವು ಶ್ರೀ ಎನ್.ಎಸ್. ಸಂಗೊಳ್ಳಿ, ನಿವೃತ್ತ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 03 ಸೇಇವಿ 96 ದಿನಾಂಕ 24.04.1998ರಂತೆ ರೂ.5000/- ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ದಿನಾಂಕ 04.03.2002ರಂತೆ ರೂ.1000/- ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಪುಟ್ಟೇಗೌಡ, ಪತ್ರಾಂಕಿತ ಸಹಾಯಕ, ಉಪ ಕಾರ್ಯದರ್ಶಿ, ಸಿಆಸುಇ (ಸೇವೆಗಳು) ರವರ ಆಪ್ತ ಶಾಖೆ ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಮುಖ್ಯ ಇಂಜಿನಿಯರ್ (ಸಂಪರ್ಕ ಮತ್ತು ಕಟ್ಟಡಗಳು), ಬೆಂಗಳೂರು ಇವರು ಒದಗಿಸಲು ಕ್ರಮ ಕೈಗೊಳ್ಳುತ್ತಾರೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಚ್.ಆರ್. ನಾಗೇಂದ್ರ**

ಪಿ.ಆರ್.954

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಶ್ರೀ ಡಿ.ಬಿ. ಗಣಾಚಾರಿ, ಶ್ರೀ ಎಸ್.ಆರ್. ಹಿರೇಮಠ, ಸರ್ಕಾರದ ಅಧೀನ ಕಾರ್ಯದರ್ಶಿಗಳು ಹಾಗೂ ಮುನಿರಾಜಪ್ಪ, ಹಿರಿಯ ಸಹಾಯಕರ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 19 ಎಸ್ಇಎನ್ 2004 ದಿನಾಂಕ 15.4.2005.

**ಪ್ರಸ್ತಾವನೆ:**

1996-97ನೇ ಸಾಲಿನಲ್ಲಿ, ಕರ್ನಾಟಕ ಸರ್ಕಾರದ ಸಚಿವಾಲಯದ, ನಗರಾಭಿವೃದ್ಧಿ ಇಲಾಖೆಯಲ್ಲಿ, ಶ್ರೀ ಡಿ.ಬಿ. ಗಣಾಚಾರಿಯವರು ಅಧೀನ ಕಾರ್ಯದರ್ಶಿಯಾಗಿ, ಶ್ರೀ ಎಸ್.ಆರ್. ಹಿರೇಮಠ್‌ರವರು ಶಾಖಾಧಿಕಾರಿಗಳಾಗಿ, ಶ್ರೀ ಜಿ. ಮುನಿರಾಜಪ್ಪ, ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಚಿತ್ರದುರ್ಗ ಜಿಲ್ಲೆ ಚಳ್ಳಕೆರೆ ಪುರಸಭೆಗೆ, ಸಂಬಂಧಿಸಿದ, **167`X147`** ಅಡಿ ಅಳತೆಯ ನಿವೇಶನವನ್ನು ಶ್ರೀ ಭೀಮಣ್ಣ ಎನ್ನುವವರಿಗೆ ಶಾಶ್ವತ ಚಿತ್ರಮಂದಿರ ನಿರ್ಮಿಸಲು, ಸರ್ಕಾರದ ಆದೇಶ ಸಂಖ್ಯೆ:ನಅಇ 180 ಟಿಎಂಡಿ 95 ದಿನಾಂಕ 18.1.1997ರಲ್ಲಿ ಅಂದಿನ ಅಧೀನ ಕಾರ್ಯದರ್ಶಿ ಶ್ರೀ ಡಿ.ಬಿ. ಗಣಾಚಾರಿರವರ ಸಹಿಯಲ್ಲಿ ಆದೇಶವನ್ನು ಹೊರಡಿಸಲಾಗಿದೆ. ಇದರಂತೆ ಶ್ರೀ ಭೀಮಣ್ಣ ನವರಿಗೆ ಚಳ್ಳಕೆರೆಯ ಪುರಸಭೆಯು ಒಂದು ಚದರ ಮೀಟರಿಗೆ **ರೂ.100.00** ರಂತೆ ದರ ವಸೂಲಿ ಮಾಡಿ ನಿವೇಶನವನ್ನು ನೊಂದಾಯಿಸಿ ಕೊಟ್ಟಿರುತ್ತದೆ. ಆದರೆ ತತ್ಸಂಬಂಧ ಕಡತ ಮತ್ತು ಆದೇಶದ ಕಛೇರಿ ಪ್ರತಿಯಲ್ಲಿ ಚದರ ಅಡಿಗೆ **ರೂ.100.00** ದರ ವಿಧಿಸಿ ಮಾರಾಟ ಮಾಡಲು ಅನುಮೋದನೆಯಾಗಿರುತ್ತದೆ. ಆದ್ದರಿಂದ ಆದೇಶದ ಮೂಲ ಪ್ರತಿಯಲ್ಲಿ ಚದರ ಅಡಿ ಅನ್ನುವ ಬದಲಾಗಿ, ಚದರ ಮೀಟರ್ ಎಂದು ನಮೂದಿಸಿ ಕಛೇರಿ ಪ್ರತಿಯಲ್ಲಿ ಚದರ ಅಡಿ ಎಂದು ತಿದ್ದಿ ಪುರಸಭೆಗೆ ರೂ.26,95,481/- ನಷ್ಟವುಂಟಾಗಲು ಕಾರಣರಾದ, ಹಾಗೂ ಕಡತ ಸಂಖ್ಯೆ:ವನಇ 180 ಟಿಎಂಡಿ 95ರ 2 ಟಿಪ್ಪಣಿ ಹಾಳೆಗಳನ್ನು ಹರಿದು ಹಾಕಿದ ಆರೋಪಕ್ಕಾಗಿ ಶ್ರೀ ಡಿ.ಬಿ. ಗಣಾಚಾರಿ, ಶ್ರೀ ಎಸ್.ಆರ್. ಹಿರೇಮಠ, ಅಧೀನ ಕಾರ್ಯದರ್ಶಿಗಳು ಹಾಗೂ ಶ್ರೀ ಜಿ.ಮುನಿರಾಜಪ್ಪ, ಹಿರಿಯ ಸಹಾಯಕರವರುಗಳ ದುರ್ನಡತೆ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಶ್ರೀ ಹೆಚ್.ಪಿ. ದೇಸೀಗೌಡ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ 15.4.2005ರ ಸರ್ಕಾರಿ ಆದೇಶದಲ್ಲಿ ನೇಮಕ ಮಾಡಲಾಗಿತ್ತು. ಸದರಿ ಸರ್ಕಾರಿ ಆದೇಶವನ್ನು ಸ್ವೀಕರಿಸಿದ ವಿಚಾರಣಾಧಿಕಾರಿಗಳು ತಮ್ಮ ವೈಯಕ್ತಿಕ ಹಾಗೂ ಗೃಹ ಕೃತ್ಯಗಳಿಂದ ವಿಚಾರಣೆ ನಡೆಸಲು ತಮ್ಮ ಅಶಕ್ತತೆ ವ್ಯಕ್ತ ಪಡಿಸಿದ ಹಿನ್ನೆಲೆಯಲ್ಲಿ ಬೇರೆ ವಿಚಾರಣಾಧಿಕಾರಿಯನ್ನು ನೇಮಕ ಮಾಡುವ ಕುರಿತಂತೆ ಸರ್ಕಾರವು ಪರಿಶೀಲಿಸಿ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 19 ಎಸ್ಇಎನ್ 04, ಬೆಂಗಳೂರು ದಿನಾಂಕ 28ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಶ್ರೀ ಡಿ.ಬಿ. ಗಣಾಚಾರಿ, ಹಾಗೂ ಶ್ರೀ ಎಸ್.ಆರ್. ಹಿರೇಮಠ, ಅಧೀನ ಕಾರ್ಯದರ್ಶಿ ಹಾಗೂ ಶ್ರೀ ಜಿ. ಮುನಿರಾಜಪ್ಪ, ಹಿರಿಯ ಸಹಾಯಕ ರವರುಗಳ ವಿರುದ್ಧ ವಿಚಾರಣೆ ನಡೆಸಲು ಶ್ರೀ ಹೆಚ್.ಪಿ. ದೇಸೀಗೌಡ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯಾಗಿ ಮಾಡಿರುವ ನೇಮಕಾತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ ಹಾಗೂ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಾವಳಿ ಗಳು 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎನ್. ಉಮಾಪತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರನ್ನು ಮೇಲ್ಕಂಡ ವಿಚಾರಣೆಯಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ. ಈ ವಿಚಾರಣೆಯನ್ನು 3ತಿಂಗಳ ಒಳಗಾಗಿ ಪೂರ್ಣಗೊಳಿಸಿ ಸರ್ಕಾರಕ್ಕೆ ವರದಿಯನ್ನು ನೀಡಲು ಸೂಚಿಸಲಾಗಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಶ್ರೀ ಡಿ.ಟಿ. ರಂಗನಾಥ್, ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ, ಬೆಂಗಳೂರು ಇವರು ಮಂಡನಾಧಿಕಾರಿಯಾಗಿ ಮುಂದುವರಿಯುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

ಪಿ.ಆರ್.955

**ವಿಷಯ:** ಶ್ರೀ ಡಿ.ಎನ್. ಮಹದೇವಪ್ಪ, ಅಧೀಕ್ಷಕರು ಮತ್ತು ಶ್ರೀ ಶಶಿಧರ ಶರ್ಮ, ದ್ವಿತೀಯ ದರ್ಜೆ ಸಹಾಯಕ ಅವರುಗಳಿಂದ ದಂಡನೆ ವಿಧಿಸಿದ ಸರ್ಕಾರಿ ಆದೇಶದ ವಿರುದ್ಧ ಸರ್ಕಾರಕ್ಕೆ ಸಲ್ಲಿಸಿರುವ ಪುನರ್ ಪರಿಶೀಲನಾ ಅರ್ಜಿ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 46 ಎಸ್ಇಎನ್ 01 ದಿನಾಂಕ: 08.12.2003.
2. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 46 ಎಸ್ಇಎನ್ 01 ದಿನಾಂಕ: 06.08.2004.
3. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 46 ಎಸ್ಇಎನ್ 01, ದಿನಾಂಕ: 08.11.2004.
4. ಶ್ರೀ ಡಿ.ಎನ್. ಮಹದೇವಪ್ಪ, ಅಧೀಕ್ಷಕರು, ಅವರ ದಿನಾಂಕ: 12.11.2004ರ ಪುನರ್ ಪರಿಶೀಲನಾ ಅರ್ಜಿ.
5. ಶ್ರೀ ಶಶಿಧರ ಶರ್ಮ, ದ್ವಿತೀಯ ದರ್ಜೆ ಸಹಾಯಕರು ಅವರ ದಿನಾಂಕ: 31.10.2004ರ ಪುನರ್ ಪರಿಶೀಲನಾ ಅರ್ಜಿ.

**ಪ್ರಸ್ತಾವನೆ:**

ಚಾಮರಾಜನಗರ ಜಿಲ್ಲಾ ಪಂಚಾಯತ್‌ನಲ್ಲಿ 1999-2000ರ ಸಾಲಿನಲ್ಲಿ ಶ್ರೀ ಆರ್.ಜೆ. ವಾಲೀಕರ್ ರವರು ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳಾಗಿ ಶ್ರೀ ಜವರಯ್ಯ, ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಶ್ರೀ ಮುರಳಿ, ಸಹಾಯಕ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಶ್ರೀ ಮಹದೇವಪ್ಪ ಮತ್ತು ಶ್ರೀ ಬಾಷಾ ಷರೀಫ್ ಅಧೀಕ್ಷಕರಾಗಿ ಹಾಗೂ ಶ್ರೀ ಶಶಿಧರ ಶರ್ಮ ಮತ್ತು ಶ್ರೀ ಡಿ.ಕೆ. ದೊರೆಸ್ವಾಮಿ ರವರುಗಳು ದ್ವಿತೀಯ ದರ್ಜೆ ಸಹಾಯಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಅನುದಾನ ಲಭ್ಯ ಇಲ್ಲದಿದ್ದರೂ, ವಿಧಿ ವಿಧಾನಗಳನ್ನು ಪಾಲಿಸದೆ ಪೀಠೋಪಕರಣ ಹಾಗೂ ಲೇಖನ ಸಾಮಗ್ರಿಗಳನ್ನು ಕಾನೂನು ಬಾಹಿರವಾಗಿ ಸರ್ಕಾರದಿಂದ ಅಥವಾ ಯಾವುದೇ ಇಲಾಖೆಯಿಂದ ಆದೇಶ ಇಲ್ಲದಿದ್ದರೂ ಸಹ ಒಟ್ಟು 11 ಡಿ.ಸಿ. ಬಿಲ್ಲುಗಳ ಮೂಲಕ ರೂ.1,11,51,335.00/-ಗಳ ವೆಚ್ಚ ಮಾಡಿ ಖರೀದಿಸುವಲ್ಲಿ ಅಕ್ರಮ ಅವ್ಯವಹಾರಗಳಲ್ಲಿ ಭಾಗಿಯಾಗಿ ಸರ್ಕಾರಕ್ಕೆ ಆರ್ಥಿಕ

ನಷ್ಟ ಉಂಟು ಮಾಡಿರುವ ಆರೋಪಗಳಿಗಾಗಿ ಮೇಲ್ಕಂಡ ಅಧಿಕಾರಿ/ ನೌಕರರುಗಳ ವಿರುದ್ಧ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಸಲ್ಲಿಸಿರುವುದನ್ನು ಪರಿಶೀಲಿಸಿ ಅದನ್ನು ಒಪ್ಪಿಕೊಂಡ ಸರ್ಕಾರವು ಮೇಲೆ ಓದಲಾದ (1)ರ ದಿನಾಂಕ: 08.12.2003ರ ಸರ್ಕಾರದ ಆದೇಶದಲ್ಲಿ ಶ್ರೀ ಎಸ್.ಮುರಳಿ, ಸಹಾಯಕ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರನ್ನು ಅದರ ಮೇಲಿನ ಆರೋಪಗಳಿಂದ ಆರೋಪ ಮುಕ್ತರನ್ನಾಗಿಸಿ ಆದೇಶ ಹೊರಡಿಸಲಾಯಿತು. ಮೇಲೆ ಓದಲಾದ (2) ಮತ್ತು (3)ರ ಸರ್ಕಾರಿ ಆದೇಶಗಳಲ್ಲಿ ಶ್ರೀ ಆರ್.ಜಿ. ವಾಲೀಕರ್, ಕೆ.ಎ.ಎಸ್. ಅಧಿಕಾರಿ, ಶ್ರೀ ಮಹದೇವಪ್ಪ, ಅಧೀಕ್ಷಕರು, ಮತ್ತು ಶ್ರೀ ಶಶಿಧರ ಶರ್ಮ, ದ್ವಿತೀಯ ದರ್ಜೆ ಸಹಾಯಕರು ಅವರುಗಳಿಗೆ ಕ್ರಮವಾಗಿ ತಲಾ 3 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರದಂತೆ ಹಾಗೂ ಶ್ರೀ ಜವರಯ್ಯ, ನಿವೃತ್ತ ಉಪ ನಿರ್ದೇಶಕರು ಅವರಿಂದ ಸರ್ಕಾರಕ್ಕೆ ನಷ್ಟವಾಗಿರುವ ರೂ.4,06,872/-ಗಳನ್ನು ಅವರ ನಿವೃತ್ತಿ ಸೌಲಭ್ಯಗಳಿಂದ ವಸೂಲಿ ಮಾಡಲು ಹಾಗೂ ವಾರ್ಷಿಕ ನಿವೃತ್ತಿ ವೇತನದಿಂದ ರೂ.1,000/-ಗಳನ್ನು ನಿರಂತರವಾಗಿ, ಶ್ರೀ ಬಾಷಾ ಷರೀಫ್, ನಿವೃತ್ತ ಅಧೀಕ್ಷಕರು ಅವರಿಂದ ಸರ್ಕಾರಕ್ಕೆ ನಷ್ಟವಾಗಿರುವ ರೂ.1,63,900/-ಗಳನ್ನು ಅವರ ನಿವೃತ್ತಿ ಸೌಲಭ್ಯಗಳಿಂದ ವಸೂಲಿ ಮಾಡಲು ಹಾಗೂ ಅವರ ಮಾಸಿಕ ವಿಶ್ರಾಂತಿ ವೇತನದಿಂದ ರೂ.500/-ಗಳನ್ನು ನಿರಂತರವಾಗಿ ಮತ್ತು ಶ್ರೀ ಡಿ.ಕೆ. ದೊರೆಸ್ವಾಮಿ, ನಿವೃತ್ತ ದ್ವಿತೀಯ ದರ್ಜೆ ಸಹಾಯಕರು ಅವರ ಮಾಸಿಕ ನಿವೃತ್ತಿ ವೇತನದಿಂದ ರೂ.500/-ಗಳನ್ನು ನಿರಂತರವಾಗಿ ಕಡಿತಗೊಳಿಸುವ ದಂಡನೆಯನ್ನು ವಿಧಿಸಲಾಗಿದೆ.

ಈ ಮೇಲ್ಕಂಡ ಅಧಿಕಾರಿ/ ನೌಕರರ ಪೈಕಿ ಶ್ರೀ ಮಹದೇವಪ್ಪ, ಅಧೀಕ್ಷಕರು ಮತ್ತು ಶಶಿಧರ ಶರ್ಮ, ದ್ವಿತೀಯ ದರ್ಜೆ ಸಹಾಯಕರು ಅವರುಗಳು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 26ರಡಿ ಮೇಲೆ ಓದಲಾದ (4) ಮತ್ತು(5)ರ ದಿನಾಂಕ 12.11.2004 ಮತ್ತು 31.10.2004ರಲ್ಲಿ ಸರ್ಕಾರಕ್ಕೆ ಪುನರ್ ಪರಿಶೀಲನಾ ಅರ್ಜಿ ಸಲ್ಲಿಸಿರುತ್ತಾರೆ. ಅವರುಗಳು ಸಲ್ಲಿಸಿರುವ ಪುನರ್ ಪರಿಶೀಲನಾ ಅರ್ಜಿಯಲ್ಲಿ ತಮ್ಮಗಳ ಮೇಲೆ ವಿಧಿಸಿರುವ ದಂಡನೆಯನ್ನು ರದ್ದುಗೊಳಿಸಲು ಕೋರಿರುತ್ತಾರೆ. ಅದರಂತೆ ಅವರುಗಳು ಸಲ್ಲಿಸಲಾದ ಪುನರ್ ಪರಿಶೀಲನಾ ಅರ್ಜಿಯನ್ನು ಪರಿಶೀಲಿಸಿ ಯಾವುದೇ ಹೊಸ ಅಂಶಗಳು ಇಲ್ಲದೆ ಇರುವುದರಿಂದ ಸದರಿ ಪುನರ್ ಪರಿಶೀಲನಾ ಅರ್ಜಿಯನ್ನು ತಿರಸ್ಕರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 29, ಎಸ್‌ಇಎನ್ 2005, ಬೆಂಗಳೂರು, ದಿನಾಂಕ: 20ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಶ್ರೀ ಡಿ.ಎನ್. ಮಹದೇವಪ್ಪ, ಅಧೀಕ್ಷಕರು ಮತ್ತು ಶಶಿಧರ ಶರ್ಮ, ದ್ವಿತೀಯ ದರ್ಜೆ ಸಹಾಯಕರು ಅವರುಗಳ ಪುನರ್ ಪರಿಶೀಲನಾ ಅರ್ಜಿಗಳನ್ನು ತಿರಸ್ಕರಿಸಿ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 46 ಎಸ್‌ಇಎನ್ 2001 ದಿನಾಂಕ: 06.08.2004ರ ಆದೇಶದಲ್ಲಿನ ಅವರುಗಳ ದಂಡನೆಯನ್ನು ಸ್ಥಿರೀಕರಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 956

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

**ವಿಷಯ:** ಶ್ರೀ ಮಲ್ಲಿಕಾರ್ಜುನಪ್ಪ ಹತ್ತಿ, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ-ಆರೋಪ ಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಕ್ರಮಾಂಕ ಸಿಆಸುಇ 67 ಎಸ್‌ಇಎಸ್ 99 ದಿನಾಂಕ 20.8.2001.
2. ಶ್ರೀ ಮಲ್ಲಿಕಾರ್ಜುನಪ್ಪ ಹತ್ತಿ, ನಿವೃತ್ತ ಕೆಎಎಸ್ ಅಧಿಕಾರಿ ಅವರ ಉತ್ತರ ದಿನಾಂಕ 15.10.2001.

**ಪ್ರಸ್ತಾವನೆ:**

ಬೀದರ್ ಜಿಲ್ಲಾ ಕಾರಂಜಾ ಯೋಜನೆಯ ವಿಶೇಷ ಭೂಸ್ವಾಧೀನಾಧಿಕಾರಿ ಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಕಾರಂಜಾ ಯೋಜನೆಗಾಗಿ ಸ್ವಾಧೀನಪಡಿಸಿಕೊಂಡ ಜಮೀನುಗಳ ಪೈಕಿ ಬಾಲ್ಕಿ ತಾಲ್ಲೂಕಿನ ಬ್ಯಾಲಹಳ್ಳಿ(ಕೆ) ಗ್ರಾಮದ ಜಮೀನನ್ನು ಡಿಸ್ಟ್ರಿಬ್ಯೂಟರಿ ನಂ.1 ರಿಂದ 4 ಮತ್ತು ಎಲ್.ಐ ಕಾಲುವೆ ನಿರ್ಮಾಣಕ್ಕಾಗಿ ಸ್ವಾಧೀನ ಪಡಿಸಿಕೊಳ್ಳುವ ಉದ್ದೇಶದಿಂದ ಕರ್ನಾಟಕ ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆಯನ್ನು ರಾಜ್ಯಪತ್ರದಲ್ಲಿ ದಿನಾಂಕ 20.8.98 ರಂದು ಪ್ರಕಟಿಸಿದ್ದು ತದನಂತರ ದಿನಾಂಕ 23.9.99ರ ಒಳಗಾಗಿ ಸದರಿ ಕಾಯ್ದೆಯ ಕಲಂ 6ರ ಪ್ರಕಾರ ಘೋಷಣೆಗೆ ಸರ್ಕಾರದಿಂದ ಅನುಮೋದನೆ ಪಡೆಯಬೇಕಾಗಿತ್ತು. ಆದರೆ ಸದರಿ ದಿನಾಂಕದೊಳಗಾಗಿ ಘೋಷಣೆ ಪ್ರಕಟವಾಗದೇ ಇದ್ದುದ್ದಕ್ಕಾಗಿ ಪ್ರಕರಣವು ಅಸಿಂಧುವಾಗಿ ಆ ಮೂಲಕ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡುವ ಮೂಲಕ ದುರ್ನಡತೆ ಎಸಗಿರುವ ಆರೋಪಕ್ಕಾಗಿ ಶ್ರೀ ಮಲ್ಲಿಕಾರ್ಜುನಪ್ಪ ಹತ್ತಿ, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿನಾಂಕ 20.8.2001ರ ಜ್ಞಾಪನಾ ದೊಂದಿಗೆ ದೋಷಾರೋಪಣೆಗಳನ್ನು ಜಾರಿ ಮಾಡುವುದರ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಜ್ಞಾಪನಕ್ಕೆ ಮೇಲೆ (2)ರಲ್ಲಿ ಓದಲಾದ ದಿನಾಂಕ 15.10.2001ರಂದು ಉತ್ತರ ಸಲ್ಲಿಸಿ ಜಿಲ್ಲಾಧಿಕಾರಿಗಳ ಆದೇಶದ ಮೇರೆಗೆ ಕಾಯ್ದೆ ಕಲಂ 4(1)ರ ಅಧಿಸೂಚನೆಯನ್ನು ದಿನಾಂಕ 16.6.98 ರಂದು ಹೊರಡಿಸಿ ಅದರನ್ವಯ ಸಾರ್ವಜನಿಕ ನೋಟೀಸುಗಳನ್ನು ಜಾರಿ ಮಾಡಲಾಗಿರುತ್ತದೆ. ಕಲಂ 6 ರಡಿಯಲ್ಲಿ ಸರ್ಕಾರದ ಕಂದಾಯ ಇಲಾಖೆಯಿಂದ ಈ ಅಧಿಸೂಚನೆ ಅನುಮೋದಿಸಲ್ಪಡಬೇಕಾಗಿದ್ದರಿಂದ ಅವಶ್ಯಕ ಎಲ್ಲಾ ದಾಖಲಾತಿಗಳನ್ನು ತಯಾರಿಸಿ ದಿನಾಂಕ 15.9.99ರಂದು ಕಂದಾಯ ಇಲಾಖೆಗೆ ಸಲ್ಲಿಸಲಾಗಿದ್ದರೂ ಸಹ ಕಂದಾಯ ಇಲಾಖೆಯು ದಿನಾಂಕ 23.9.99ರವರೆಗೆ ಯಾವುದೇ ಕ್ರಮ ಕೈಗೊಳ್ಳದೆ ಈ ಪ್ರಕರಣವನ್ನು ಅಸಿಂಧುವಾಗಲು ಬಿಟ್ಟಿರುತ್ತಾರೆ. ಸರ್ಕಾರದ ಮಟ್ಟದಲ್ಲಿ ವಿಳಂಬವಾಗಿದ್ದರೂ ಸಹ ಅದನ್ನು ತಮ್ಮ ಮೇಲೆ ಜವಾಬ್ದಾರಿ ಹೊರಿಸಿದ್ದಾರೆ. ಕಲಂ 6 ರ ಅಡಿಯಲ್ಲಿ ಘೋಷಣೆ ಹೊರಡಿಸುವಲ್ಲಿ ಸರ್ಕಾರದ ಮಟ್ಟದಲ್ಲಿ ವಿಳಂಬವಾಗಿದ್ದು ಇದರಿಂದಾದ ಆರ್ಥಿಕ ನಷ್ಟವು ಸರ್ಕಾರದ ಮಟ್ಟದಲ್ಲಿಯ ಅಧಿಕಾರಿ/ಸಿಬ್ಬಂದಿಯೇ ಹೊಣೆಗಾರರಾಗುತ್ತಾರೆಂದು ತಿಳಿಸಿರುತ್ತಾರೆ. ನಿಜವಾದ ತಪ್ಪಿತಸ್ಥರನ್ನು ಬಿಟ್ಟು ತಮ್ಮನ್ನು ಆರೋಪಿತರನ್ನಾಗಿ ಮಾಡಲು ಹೊರಟಿರುವುದು ತುಂಬಾ ಶೋಚನೀಯವೆಂದು ತಿಳಿಸಿ ತಮ್ಮ ಮೇಲೆ ಹೊರಿಸಿರುವ ಆರೋಪವನ್ನು ಕೈಬಿಟ್ಟು ತಮ್ಮನ್ನು ಆರೋಪ ಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ. ಆರೋಪಿತರು ಮೇಲ್ಕಂಡಂತೆ ನೀಡಲಾದ ಉತ್ತರವನ್ನು ಪರಿಶೀಲಿಸಿದ ಸರ್ಕಾರವು ಈ ಪ್ರಕರಣದಿಂದ ಸರ್ಕಾರಕ್ಕೆ ಆರ್ಥಿಕ ನಷ್ಟ ರೂ.11,000 ಗಳೆಂದು ನಿರ್ಧರಿಸಲಾಗಿದ್ದು ಕಲಂ 6ರ ಅಧಿಸೂಚನೆಯನ್ನು ಸರ್ಕಾರದ

ಮಟ್ಟದಲ್ಲಿ ಹೊರಡಿಸುವುದು ಸರ್ಕಾರದ ಜವಾಬ್ದಾರಿಯಾಗಿರುತ್ತದೆ. ಆದ್ದರಿಂದ ಆರೋಪಿತರ ಉತ್ತರವನ್ನು ಒಪ್ಪಿಕೊಂಡ ಸರ್ಕಾರವು ಅವರನ್ನು ಆರೋಪಮುಕ್ತ ರನ್ನಾಗಿಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 67 ಎಸ್ಇಎನ್ 99 ದಿನಾಂಕ 23ನೇ ಜೂನ್ , 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಶ್ರೀ ಮಲ್ಲಿಕಾರ್ಜುನಪ್ಪ ಹತ್ತಿ, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸುತ್ತದೆ.

ಈ ಪ್ರಕರಣದ ಮಟ್ಟಿಗೆ ಅವರ ವಿರುದ್ಧ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಆ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

ಪಿ.ಆರ್. 957

**ವಿಷಯ:** ಶ್ರೀ ಎಸ್.ಸಿದ್ದಲಿಂಗಮೂರ್ತಿ, ನಿವೃತ್ತ ಮುಖ್ಯ ಇಂಜಿನಿಯರ್‌ರವರ ವಿರುದ್ಧ ಇಲಾಖಾ ವಿಚಾರಣೆ, ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 40 ಎಸ್ಇಎನ್ 2003, ದಿನಾಂಕ 23.12.2003
2. ಶ್ರೀ ಸೋಸಲೆ ಇಂದುಧರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರ ದಿನಾಂಕ 9.9.2004ರ ವಿಚಾರಣಾ ವರದಿ.
3. 2ನೇ ಕಾರಣ ಕೇಳಿ ನೋಟೀಸ್ ಸಂಖ್ಯೆ:ಸಿಆಸುಇ 40, ಎಸ್ಇಎನ್ 2004 ದಿನಾಂಕ 30.11.2004.
4. ಶ್ರೀ ಎಸ್.ಸಿದ್ದಲಿಂಗಮೂರ್ತಿ, ನಿವೃತ್ತ ಮುಖ್ಯ ಇಂಜಿನಿಯರ್ ರವರ ದಿನಾಂಕ 16.12.04ರ ಲಿಖಿತ ಉತ್ತರ.
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 23 ಸಿಎನ್ಎಸ್ 05 ದಿನಾಂಕ 8.6.2005.

**ಪ್ರಸ್ತಾವನೆ:**

ಶ್ರೀ ಎಸ್. ಸಿದ್ದಲಿಂಗಮೂರ್ತಿ, ನಿವೃತ್ತ ಮುಖ್ಯ ಇಂಜಿನಿಯರ್‌ರವರು ಸರ್ಕಾರಿ ಸೇವೆಗೆ ಸೇರಿದ ದಿನಾಂಕದಿಂದಲೂ ನಿವೃತ್ತಿ ಹೊಂದುವರೆಗೂ ತಮ್ಮ ಆಸ್ತಿ ಮತ್ತು ದಾಯಿತ್ವಗಳನ್ನು ಸಕ್ಷಮ ಪ್ರಾಧಿಕಾರಕ್ಕೆ ಸಲ್ಲಿಸದೆ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ 1966ರ ನಿಯಮ 23(1)ನ್ನು ಉಲ್ಲಂಘಿಸಿದ ಆರೋಪದ ಸಂಬಂಧ ವಿಚಾರಣೆ ನಡೆಸಲು ಮೇಲೆ(1)ರಲ್ಲಿ ಓದಲಾದ ದಿನಾಂಕ 23.12.2003 ರ ಸರ್ಕಾರಿ ಆದೇಶದಲ್ಲಿ ಶ್ರೀ ಎಸ್.ಇಂದುಧರ್, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ(2)ರಲ್ಲಿ ಓದಲಾದ ದಿನಾಂಕ 9.9.2004ರ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿ, ಅವರ ವಿರುದ್ಧ ಹೊರಿಸಿದ ಆರೋಪಗಳು ಸಾಬೀತಾಗಿಲ್ಲವೆಂದು ವರದಿ ನೀಡಿದ್ದಾರೆ. ಈ ವರದಿಯನ್ನು ಪರಿಶೀಲಿಸಿದ ಸರ್ಕಾರವು ವಿಚಾರಣಾಧಿಕಾರಿಗಳು ತಾಂತ್ರಿಕ ಅಂಶಗಳ ಆಧಾರದ ಮೇಲೆ ಈ ರೀತಿ ನಿರ್ಣಯಕ್ಕೆ ಬಂದಿರುವುದನ್ನು ಮನಗಂಡು ಹಾಗೂ ಪ್ರಕರಣದ ಸಾಕ್ಷ್ಯಾಧಾರಗಳನ್ನು ಪರಿಗಣಿಸಿ ವಿಚಾರಣಾ ವರದಿಯನ್ನು ತಿರಸ್ಕರಿಸಲು ಸರ್ಕಾರವು ತೀರ್ಮಾನಿಸಿ, ಸದರಿ ವಿಚಾರಣಾ ವರದಿಯ ಪ್ರತಿಯನ್ನು ಆರೋಪಿತ ಅಧಿಕಾರಿ ಮೇಲೆ(3)ರಲ್ಲಿ ಓದಲಾದ ದಿನಾಂಕ 30.11.2004ರ 2ನೇ ಕಾರಣ ಕೇಳುವ ನೋಟೀಸ್ ನೀಡಿ ಆ ಬಗ್ಗೆ ತಮ್ಮ ಅಹವಾಲು/ಹೇಳಿಕೆ ಏನಾದರೂ ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಶ್ರೀ ಎಸ್.ಸಿದ್ದಲಿಂಗಮೂರ್ತಿ, ನಿವೃತ್ತ ಮುಖ್ಯ ಇಂಜಿನೀಯರ್‌ರವರು ಮೇಲೆ(4)ರಲ್ಲಿ ಓದಲಾದ ದಿನಾಂಕ 16.12.2004 ರಲ್ಲಿ ಉತ್ತರ ಸಲ್ಲಿಸಿ ವಿಚಾರಣಾ ಸಮಯದಲ್ಲಿ ವಿಚಾರಣಾಧಿಕಾರಿಗಳ ಮುಂದೆ ತಮ್ಮ ಆಸ್ತಿ/ಹೊಣೆಗಾರಿಕೆ ಪಟ್ಟಿಯನ್ನು ಸಂಬಂಧಪಟ್ಟ ಮೇಲಾಧಿಕಾರಿಯವರಿಗೆ ಕ್ರಮವಾಗಿ ತಪ್ಪದೆ ಸಲ್ಲಿಸುತ್ತಾ ಬಂದಿದ್ದು ಇದಕ್ಕೆ ಪೂರಕವಾಗಿ 1989-90, 1990-91ನೇ ಸಾಲುಗಳಲ್ಲಿ ತಮ್ಮ ಮೇಲಾಧಿಕಾರಿಯವರಿಗೆ ಸಲ್ಲಿಸಿರುವ ಕುರಿತಂತೆ ಸ್ವೀಕೃತಿಯನ್ನು ಅವರ ಮುಂದೆ ಹಾಜರುಪಡಿಸಿರುವುದಾಗಿ ತಿಳಿಸಿರುತ್ತಾರೆ. ಹೀಗಾಗಿ ಯಾವ ವಿಷಯವನ್ನು ಮರೆ ಮಾಚಿರುವುದಿಲ್ಲವೆಂದು ತಿಳಿಸಿ ವಿಚಾರಣಾಧಿಕಾರಿಗಳು ನೀಡಿರುವ ವರದಿಯನ್ನು ಅಂಗೀಕರಿಸಿ ಪ್ರಕರಣವನ್ನು ಮುಕ್ತಾಯಗೊಳಿಸುವಂತೆ ಕೋರಿದ್ದಾರೆ.

ಆರೋಪಿತರು ಸಲ್ಲಿಸಿದ ಉತ್ತರದ ಬೆಳಕಿನಲ್ಲಿ ಪ್ರಕರಣವನ್ನು ಮತ್ತೆ ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಸರ್ಕಾರದ ನೋಟೀಸ್‌ಗೆ ಉತ್ತರಿಸದೇ ಇರುವುದರಿಂದ, ಆರೋಪಿತ ಅಧಿಕಾರಿಯು 89-90 ಮತ್ತು 90-91ನೇ ಸಾಲಿಗೆ ಆಸ್ತಿ/ಹೊಣೆಗಾರಿಕೆ ಪಟ್ಟಿಯನ್ನು ಮೇಲಾಧಿಕಾರಿಗೆ ಸಲ್ಲಿಸಿರುವುದಾಗಿ ತಿಳಿಸಿದ್ದರೂ ಸಹ ಈ ಕುರಿತಂತೆ ಸರ್ಕಾರದಲ್ಲಿ ದಾಖಲೆಗಳು ಇಲ್ಲದಿರುವುದರಿಂದ ಹಾಗೂ ಶ್ರೀಯುತರು ಸರ್ಕಾರಕ್ಕೆ ಇನ್ನಿತರೇ ಸಾಲುಗಳ ಆಸ್ತಿ/ಹೊಣೆಗಾರಿಕೆ ಪಟ್ಟಿ ಸಲ್ಲಿಸಿರುವುದಕ್ಕೆ ಯಾವುದೇ ಸಾಕ್ಷ್ಯಾಧಾರಗಳನ್ನು ಒದಗಿಸದೇ ಇರುವುದರಿಂದ ಸರ್ಕಾರವು ವಿಚಾರಣಾ ವರದಿಯನ್ನು ಒಪ್ಪದೆ ಇವರ ವಿರುದ್ಧ ಮಾಡಲಾದ ಆರೋಪವು ಸಾಬೀತಾಗಿದೆ ಎಂದು ನಿರ್ಣಯಿಸಿ ಅವರಿಗೆ ಸೂಕ್ತ ದಂಡನೆ ವಿಧಿಸಲು ತೀರ್ಮಾನಿಸಿ ಈ ದಂಡನೆಯ ಪ್ರಸ್ತಾವನೆಗೆ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯೊಡನೆ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 40 ಎಸ್ಇಎನ್ 2003 ಬೆಂಗಳೂರು, ದಿನಾಂಕ 23ನೇ ಜೂನ್ 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು, ಶ್ರೀ ಎಸ್.ಸಿದ್ದಲಿಂಗಮೂರ್ತಿ, ನಿವೃತ್ತ ಮುಖ್ಯ ಇಂಜಿನೀಯರ್ ಅವರ ಮಾಸಿಕ ವಿಶ್ರಾಂತಿ ವೇತನದಿಂದ ಮಾಹೆಯಾನ ರೂ.250/- (ಇನ್ನೂರ ಐವತ್ತು ರೂಪಾಯಿಗಳು) ಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ 2 ವರ್ಷಗಳ (ಎರಡು) ಅವಧಿಗೆ ಕಡಿತಗೊಳಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

ಪಿ.ಆರ್. 958

**ವಿಷಯ:** ಶ್ರೀ ಆರ್.ಜೆ. ವಾಲೀಕರ್, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಹಾಗೂ ಶ್ರೀ ಬಾಷಾ ಷರೀಫ್, ನಿವೃತ್ತ ಅಧೀಕ್ಷಕರು ಅವರುಗಳಿಂದ ದಂಡನೆ ವಿಧಿಸಿದ ಸರ್ಕಾರಿ ಆದೇಶದ ವಿರುದ್ಧ ಗೌರವಾನ್ವಿತ ರಾಜ್ಯಪಾಲರಿಗೆ ಮೇಲ್ಮನವಿ ಸಲ್ಲಿಸಿದ ಕುರಿತು ಹಾಗೂ ಮೇಲ್ಮನವಿಯನ್ನು ವಜಾ ಮಾಡಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅದೇಶ ಸಂಖ್ಯೆ:ಸಿಆಸುಇ 46 ಎಸ್‌ಇಎನ್ 01 ದಿನಾಂಕ 8.12.2003.
2. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 46 ಎಸ್‌ಇಎನ್ 01 ದಿನಾಂಕ 6.8.2004.
3. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 46 ಎಸ್‌ಇಎನ್ 01 ದಿನಾಂಕ 8.11.2004.
4. ಶ್ರೀ ಆರ್.ಜೆ. ವಾಲೀಕರ್, ಕೆಎಎಸ್ ಅಧಿಕಾರಿ ಅವರ ದಿನಾಂಕ:4.11.2004ರ ಮೇಲ್ಮನವಿ.
5. ಶ್ರೀ ಬಾಷಾ ಷರೀಫ್, ನಿವೃತ್ತ ಅಧೀಕ್ಷಕರು ಅವರ ದಿನಾಂಕ:7.2.2005ರ ಮೇಲ್ಮನವಿ.

**ಪ್ರಸ್ತಾವನೆ:**

ಚಾಮರಾಜನಗರ ಜಿಲ್ಲಾ ಪಂಚಾಯತ್‌ನಲ್ಲಿ 1999-2000ರ ಸಾಲಿನಲ್ಲಿ ಶ್ರೀ ಆರ್.ಜೆ. ವಾಲೀಕರ್ ರವರು ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳಾಗಿ ಶ್ರೀ ಜವರಯ್ಯ, ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಶ್ರೀ ಮುರಳಿ, ಸಹಾಯಕ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ, ಶ್ರೀ ಮಹದೇವಪ್ಪ ಮತ್ತು ಶ್ರೀ ಬಾಷಾ ಷರೀಫ್ ಅಧೀಕ್ಷಕರಾಗಿ ಹಾಗೂ ಶ್ರೀ ಶಶಿಧರ ಶರ್ಮ ಮತ್ತು ಶ್ರೀ ಡಿ.ಕೆ. ದೊರೆಸ್ವಾಮಿ ರವರುಗಳು ದ್ವಿತೀಯ ದರ್ಜೆ ಸಹಾಯಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಅನುದಾನ ಲಭ್ಯ ಇಲ್ಲದಿದ್ದರೂ, ವಿಧಿ ವಿಧಾನಗಳನ್ನು ಪಾಲಿಸದೆ ಪೀಠೋಪಕರಣ ಹಾಗೂ ಲೇಖನ ಸಾಮಗ್ರಿಗಳನ್ನು ಕಾನೂನು ಬಾಹಿರವಾಗಿ ಸರ್ಕಾರದಿಂದ ಅಥವಾ ಯಾವುದೇ ಇಲಾಖೆಯಿಂದ ಆದೇಶ ಇಲ್ಲದಿದ್ದರೂ ಸಹ ಒಟ್ಟು 11 ಡಿ.ಸಿ. ಬಿಲ್ಲು ಗಳ ಮೂಲಕ ರೂ.1,11,51,335.00/-ಗಳ ವೆಚ್ಚ ಮಾಡಿ ಖರೀದಿಸುವಲ್ಲಿ ಅಕ್ರಮ ಅವ್ಯವಹಾರಗಳಲ್ಲಿ ಭಾಗಿಯಾಗಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿರುವ ಆರೋಪಗಳಿಗಾಗಿ ಮೇಲ್ಕಂಡ ಅಧಿಕಾರಿ/ನೌಕರರುಗಳ ವಿರುದ್ಧ ಜಂಟಿ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಸಲ್ಲಿಸಿರುವುದನ್ನು ಪರಿಶೀಲಿಸಿ ಅದನ್ನು ಒಪ್ಪಿಕೊಂಡ ಸರ್ಕಾರವು ಮೇಲೆ ಓದಲಾದ (1)ರ ದಿನಾಂಕ 8.12.2003ರ ಸರ್ಕಾರದ ಆದೇಶದಲ್ಲಿ ಶ್ರೀ ಎಸ್. ಮುರಳಿ, ಸಹಾಯಕ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರನ್ನು ಅವರ ಮೇಲಿನ ಆರೋಪಗಳಿಂದ ಆರೋಪ ಮುಕ್ತರನ್ನಾಗಿಸಿ ಆದೇಶ ಹೊರಡಿಸಲಾಯಿತು. ಮೇಲೆ ಓದಲಾದ (2) ಮತ್ತು (3)ರ ದಿನಾಂಕ 6.8.2004 ಮತ್ತು 8.11.2004ರ ಸರ್ಕಾರಿ ಆದೇಶಗಳಲ್ಲಿ ಶ್ರೀ ಆರ್.ಜೆ. ವಾಲೀಕರ್, ಕೆಎಎಸ್ ಅಧಿಕಾರಿ, ಶ್ರೀ ಮಹದೇವಪ್ಪ, ಅಧೀಕ್ಷಕರು, ಮತ್ತು ಶ್ರೀ ಶಶಿಧರ ಶರ್ಮ, ದ್ವಿತೀಯ ದರ್ಜೆ ಸಹಾಯಕರು ಅವರುಗಳಿಗೆ ಕ್ರಮವಾಗಿ ತಲಾ 3 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರದಂತೆ ಹಾಗೂ ಶ್ರೀ ಜವರಯ್ಯ, ನಿವೃತ್ತ ಉಪ ನಿರ್ದೇಶಕರು ಅವರಿಂದ ಸರ್ಕಾರಕ್ಕೆ ನಷ್ಟವಾಗಿರುವ ರೂ.4,06,872/-ಗಳನ್ನು ಅವರ ನಿವೃತ್ತಿ ಸೌಲಭ್ಯಗಳಿಂದ ವಸೂಲಿ ಮಾಡಲು ಹಾಗೂ ವಾರ್ಷಿಕ ನಿವೃತ್ತಿ ವೇತನದಿಂದ ರೂ.1,000/-ಗಳನ್ನು ನಿರಂತರವಾಗಿ ಕಡಿತ ಮಾಡುವ, ಶ್ರೀ ಬಾಷಾ ಷರೀಫ್, ನಿವೃತ್ತ ಅಧೀಕ್ಷಕರು ಅವರಿಂದ ಸರ್ಕಾರಕ್ಕೆ ನಷ್ಟವಾಗಿರುವ ರೂ.1,63,900/-ಗಳನ್ನು ಅವರ ನಿವೃತ್ತಿ ಸೌಲಭ್ಯಗಳಿಂದ ವಸೂಲಿ ಮಾಡಲು ಹಾಗೂ ಅವರ ಮಾಸಿಕ ವಿಶ್ರಾಂತಿ ವೇತನದಿಂದ ರೂ.500/- ಗಳನ್ನು ನಿರಂತರವಾಗಿ ಕಡಿತಗೊಳಿಸಲು ಹಾಗೂ ಶ್ರೀ ಡಿ.ಕೆ. ದೊರೆಸ್ವಾಮಿ, ನಿವೃತ್ತ ದ್ವಿತೀಯ ದರ್ಜೆ ಸಹಾಯಕರು ಅವರ ಮಾಸಿಕ ನಿವೃತ್ತಿ ವೇತನದಿಂದ ರೂ.500/-ಗಳನ್ನು ನಿರಂತರವಾಗಿ ಕಡಿತಗೊಳಿಸುವ ದಂಡನೆಯನ್ನು ವಿಧಿಸಲಾಗಿದೆ.

ಈ ಬಗ್ಗೆ ಮೇಲ್ಕಂಡ ಅಧಿಕಾರಿ/ನೌಕರರುಗಳ ಪೈಕಿ ಶ್ರೀ ಆರ್.ಜೆ. ವಾಲೀಕರ್, ಕೆಎಎಸ್ ಅಧಿಕಾರಿ ಹಾಗೂ ಶ್ರೀ ಬಾಷಾ ಷರೀಫ್, ನಿವೃತ್ತ ಅಧೀಕ್ಷಕರು ಅವರುಗಳು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 18ರಂತೆ ಗೌರವಾನ್ವಿತ ರಾಜ್ಯಪಾಲರಿಗೆ ಮೇಲ್ಮನವಿ ಸಲ್ಲಿಸಿರುತ್ತಾರೆ. ಉಳಿದವರ್ಯಾರೂ ಮೇಲ್ಮನವಿಯನ್ನು ಸಲ್ಲಿಸಿರುವುದಿಲ್ಲ. ಅವರುಗಳು ಸಲ್ಲಿಸಿರುವ ಮೇಲ್ಕಂಡ ಮನವಿಯಲ್ಲಿ ತಮ್ಮಗಳ ಮೇಲೆ ವಿಧಿಸಿರುವ ದಂಡನೆಯನ್ನು ರದ್ದುಗೊಳಿಸಲು ಕೋರಿದ್ದಾರೆ.

ಶ್ರೀ ಆರ್.ಜೆ. ವಾಲೀಕರ್, ಕೆಎಎಸ್ ಅಧಿಕಾರಿ ಅವರು ಸಲ್ಲಿಸಿರುವ ಮೇಲ್ಮನವಿ ಮತ್ತು ತತ್ಸಂಬಂಧ ಪರಿಶೀಲನಾ ಟಿಪ್ಪಣಿ ಈ ಕೆಳಕಂಡಂತಿರುತ್ತದೆ:

| Para Nos. | Remarks |
|---|---|
| **1 to 5** | **No Comments.** |
| a) The Indian Audit & Accounts Department vide their Report dated 26.6.2001 clearly mentions that Zilla Panchayat, Chamarajanagar had given the approvals regarding purchases made by the Education Department. In this report objections have been taken for the mistakes committed by the then DDPI and Treasury Officer, Chamarajanagar and nowhere in the report any adverse remark has been made against the Appellant in the matter of Purchases relating to Education Department. Therefore the Appellant made a written request to the Inquiry Officer to summon the report of Indian Audit & Accounts Department dated 26.6.2001 so that the Appellant can effectively defend himself in the inquiry. Despite the request this relevant and vital document was not made available to the Appellant and thus prejudice has been caused to the Appellant. The Hon'ble High Court of Karnataka in its decision reported in ILR 2004 KAR 2240 has clearly held that the burden to show that non supply of the document required by the delinquent official did not cause any prejudice to him is on the prosecution and if such documents are not furnished to the delinquent officials it amounts to denial of opportunity to the delinquent official. Therefore there is violation of principles of natural justice and on this ground alone the Inquiry Proceedings are vitiated in law. | The report of Indian Audit and Accounts Dept. referred by the AGO is not listed as a supporting document, in evidence of the lapses against the AGO in the Article of Charges. As such the AGO cannot insist on Enquiry Officer to make available that report. Further, it is not clear whether the report referred to by AGO is in relation to the purchases in question.Therefore, no violation of principles of natural justice has taken place. |

| Para Nos. | Remarks |
|---|---|
| **1 to 5** | **No Comments.** |
| b) The Inquiry Officer having come to the definite conclusion at page 40 of the report to the effect that the Chief Accounts Officer Sri. Mayagayya was not present in the Office on 30th and 31st March 2000 ought not to have held the Appellant guilty of the charge of counter signing of 11 DC bills by passing Chief Accounts officer even though the Chief Accounts officer was reportedly present in the office. Thus the finding of Inquiry Officer is contrary to the evidence on record and hence Prejudiced. | The argument of AGO is not correct. The report of Enquiry Officer (page 40 of the report) refers to the evidence against another AGO Sri. Murali, Accounts Officer. |
| c) The Inquiring Authority vide page 25 of the report having accepted the contention of the Appellant that Deputy Director of Public Instruction Mr.Javaraiah was responsible for controlling, operating, drawing and disbursing of funds and the Chief Accounts officer though present in the meeting held on 13.3.2000 did not raise any objections to the proposals ought not to have held the Appellant guilty of charges. | Though the report speaks of the responsibilities of Chief Accounts Officer, it does not mean that the other Officer has no responsibility or accountability. Therefore, his argument cannot be accepted. |
| d). In the charge memo it is mentioned that Appellant had not obtained the approval of higher authority. Infact the then DDPI who was head of the department for Education Department had placed details of requirement of materials for 363 schools with details of savings under different Heads of Accounts before the Purchase Committee of Zilla Panchayat on 13.3.2002. In the year 1998-99 itself the then Finance and Planning Committee had accorded approvals and the Purchase Committee cleared this on 13.3.2000. The then Chief Accounts Officer though present in the meeting held on 13.3.2000 did not raise any objection nor did he verify the proposal thereafter. On the other hand he remained absent on 30th and 31st of March 2000. In the absence of any objection by the Chief Accounts Officer the Purchase Committee headed by Zilla Panchayat Adhyaksha who was also the Chairman of the Purchase Committee approved the details regarding utilization of savings to procure materials for school. The Appellant had only implemented the decision of the Zilla Panchayat in the form of Counter Signing of 11 DCbills. Further, on all 11 DC bills the DDPI had clearly indicated the Budgetary Provisions. Anybody in the place of Appellant would have certainly counter signed DC bills in the light of the above circumstances. | According to G.O No. FD 1 TRS 2000 dated 18.3.2000 allocation under Salary head cannot be utilised for non salary items. Therefore, he has failed to point out this as the Head of the Organisation and also has not made any efforts to get the opinion of the CAO. His contention that CAO was absent on 30, 31st March 2000 alone is not a valid reason to countersign the bills, especially when the ZP has not delegated such powers to CEO in any of its meeting. |
| e) The Appellant respectfully submits that had he not implemented the decision of the Zilla Panchayat he would have given scope for initiating disciplinary proceedings for lapsing of government funds and disobedience of Zilla Panchayat resolution. | This is not a valid reason, further he could have advised the ZP about the factual position. |
| f). During the course of Inquiry one of the prosecution witnesses Sri. Seshagiri Rao has confirmed that all the supplies of furniture to 363 schools were made between June 2000 to February 2001 and there was no procedural irregularities. Moreover a fact finding committee was appointed by the Zilla Panchayat, Chamarajanagar to enquire into this issue and the Committee itself had physically verified the supplies of furniture and stationary articles and quality of the materials supplied were certified as good by an external agency appointed by the Zilla Panchayat. Further the Zilla Panchayat General Body in its meeting held on 27.12.2000 based on the report of Sadana Samithi has approved all the purchases with a direction to pay the balance of payment to suppliers. Vide letter dated 1.2.2001 addressed to the Respondent, the then C.E.O. of Chamarajanagar Sri. B. Dasharat has clearly stated about the post-facto sanction given by Zilla Panchayat General Body. | The charge against the AGO is regarding violation of procedure in the sanction for purchase and counter signing the bill. Therefore, the argument of the Officer that the furnitures were supplied to all the schools and its qualities are certified are all irrelevant. |

| Para Nos. | Remarks |
|---|---|
| **1 to 5** | **No Comments.** |
| g). The then Chief Accounts Officer Sri. Mayagayya was responsible for many financial lapses and a letter was addressed to the Respondent to relieve the then Chief Accounts Officer, Sri. Mayagayya from the charge of CAO, Chamarajanagar as his continuation in the post of C.A.O. was not in the interest of Zilla Panchayat, Government and Public. Infact a series of communications were made to finance department by the Appellant's predecessors in office to initiate departmental proceedings for the alleged lapses committed by him while working as C.A.O. Chamarajanagar. Instead of initiating Departmental of proceedings against the C.A.O. the Respondent had made the very official as a star prosecution witness in the Departmental Proceedings against the Appellant and the evidence of such an official has been given credence/weightage while holding the Appellant guilty of the charges. The Inquiring Authority has not considered the file which was produced during the course of Inquiry and no discussion what so ever has been made by the Inquirying Authority. The Inquirying Authority has completely ignored the adverse remarks, comments and allegations leveled against the Chief Accounts Officer and on the other hand having come to the definite conclusions with regard to the manipulations made by the C.A.O. in attendance register has accepted the evidence of an unreliable prosecution witness. | As seen from report of enquiry, the Enquiry Officer was not influenced by the witness statement of Sri. Mayagayya. On the argument of AGO that Sri. Mayagayya did not raise any objection for the proposal, the Enquiry Officer has commented that this cannot alleviate his personal respon sibility to exercise strict and close control over his sub-ordinates. As far as his remarks against the prosecution wit ness, Sri. Mayagayya these have no relevance to the present enquiry. |
| h). The Appellant was relieved from Chamarajanagar Zilla Panchayat Office on 2.5.2000 and all the supplies and payments were effected after his departure. Therefore the question of charging the Appellant for any lapses cannot and doesn't arise. | The AGO was not charged for making payment for supplying the material. Thecharge pertains to the events that took place before making payment. Therefore,his argu ment is not valid. |
| i). If there were any procedural irregularities the successive Chief Executive Officer, Accounts Officer and DDPI would not have continued the procurement activity without surrendering the amount to the Government. All the bills were not cleared and passed by the Appellant herein. On the contrary it is Sri. B. Dasharat, Chief Executive Officer, Zilla Panchayat, Chamarajanagar, who cleared and passed the bills in concurrence with Chief Accounts Officer, DDPI and Treasury Officer. Hence the findings of the Inquiry Officer are Prejudice. | The appellent's remarks against his successors has no relevance. |
| j) The Enquirying Authority having held that Sri. Mayagayya, Chief Accounts Officer was absent on 30th and 31st March 2000 could not have held that the Appellant is guilty of the charge of counter signing of 11 DC bills bypassing the Chief Accounts Officer. The Appellant submits that as the Chief Executive Officer of Zilla Panchayat he had the power to counter sign the DC bills and the Chief Accounts Officer was counter signing the DC bills by virtue of delegation of powers by the C.E.O. Thus in the absence of Chief Accounts Officer the Appellant had counter signed the 11 DC bills. Thus the delegating authority cannot be charged for exercising the authority vested in it since by delegation of authority the power to counter sign the DC bills was not taken away or curtailed. | The appellent in this para is trying to suppress the fact that he has violated the financial codes. He only argues that, he has powers to counter sign the bills. This does not mean that he should counter sign the bills which is not permitted under rules. |

| Para Nos. | Remarks |
|---|---|
| **1 to 5** | **No Comments.** |
| k) The Inquiring Authority has traversed beyond the articles of charges framed against the Appellant by citing article 308-314 of Karnataka Financial Code and Section 187 & 193 of Panchayat Raj Act 1993. The Appellant was not charged for the violation of any of these articles of the Acts and further they were not the subject matter of Inquiry and in this aspect of the matter the Inquiring Authority has committed an irregularity by traversing beyond the articles of charges while arriving at the findings. Therefore the findings are unjustifiable. | While deliberating on the charges leveled against an Officer, Enquiry Officer can cite relevant rules related to the issue. These need not necessarily be mentioned in the Article of Charges. As long as the report of Enquiry Officer does not deviate from the charges made against the AGO, there is no lapse on the part of the Enquiry Officer in citing such rules. Hence the argument of the Officer is not justified. |
| l) The Appellant submits that if there was any procedural lapse in counter signing of the 11 DC bills, the funds drawn by the DDPI should have been surrendered to the Government by the then Chief Executive Officer Sri. B. Dasharath and Chief Accounts Officer Sri. Mayagayya on or after 2.5.2000 when the Appellant was relieved of his duties as Chief Executive Officer, Zilla Panchayat, Chamarajanagar. The Appellant's successor Sri. B. Dasharath (the then CEO, Chamarajanagar) neither surrendered the funds nor sought ratification for purchases made. After the Appellants departure from Chamarajanagar, the funds were drawn, utilized and thereafter the Appellant was victimized for counter signing of the 11 DC bills. The Appellant has been punished for implementing the decision of Zilla Panchayat even after the Zilla Panchayat ratifying all the purchases and regularizing the whole thing after satisfying itself with the quality of materials supplied. | The argument of appellent is irrelevant. He speaks of the post scenario incidents of the offence by forgetting the lapse committed by him. |
| m) The Appellant submits that the Purchase Committee in its proceeding dated 13.3.2000 directed the then Deputy Director of Public Instruction to purchase the materials from KSIMC (Government of Karnataka undertaking) and therefore the question of rate comparison cannot and does not arise and the allegation made in this behalf is patently unjust and defies all logic and reasoning. | No such charges made against the appellent. |
| n) The Appellant submits that the Respondent had not leveled any charges against the Appellant for financial loss or misappropriation of funds and infact no such finding is recorded against the Appellant by the Inquiring Authority. Therefore Punishment imposed is unjust and deserves to be quashed. | On examination of the report of enquiry with due regard to gravity of offence, the Disciplinary Authority has taken a decision to impose a suitable penalty which is fully justified. Therefore, none of the grounds of appeal offered by the appellent are justified. Therefore his appeal petition is liable to be rejected. |

ಶ್ರೀ ಬಾಷಾ ಷರೀಫ್, ನಿವೃತ್ತ ಅಧೀಕ್ಷಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಅವರು ಸಲ್ಲಿಸಿದ ಮೇಲ್ಮನವಿ ಮತ್ತು ತತ್ಸಂಬಂಧ ಪರಿಶೀಲನಾ ಟಿಪ್ಪಣಿ ಈ ಕೆಳಕಂಡಂತಿದೆ:

| Para Nos. | Remarks |
|---|---|
| 2. a,b,c. ಈ ಕಾರಣ ಕೇಳಿ ನೀಡಲಾದ ನೋಟೀಸ್‌ಗೆ ನನ್ನ ಲಿಖಿತ ಹೇಳಿಕೆಯನ್ನು ಶಿಸ್ತು ಪ್ರಾಧಿಕಾರಿಗಳಿಗೆ ಸಲ್ಲಿಸಿ ನನ್ನ ವಿರುದ್ಧ ಮಾಡಲಾದ ಆರೋಪಗಳು ನಿರಾಧಾರ ವಾದುದೆಂದು ಸಲ್ಲಿಸಲಾಯಿತು. ಆರೋಪ ಗಳನ್ನು ನಾನು ನಿರಾಕರಿಸಿದ ಕಾರಣ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು ೧೯೫೭ರ ನಿಯಮ ೧೧ರ ಅಡಿಯಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಲಾಯಿತು. ನನ್ನ ವಿರುದ್ಧ ಮೂರು ಆರೋಪಗಳನ್ನು ಮಾಡಿದ್ದು ಇವುಗಳ ಬಗ್ಗೆ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ ಅವರ ವರದಿಯಲ್ಲಿ ಕೆಳಕಂಡಂತೆ ನಿರ್ಣಯ ನೀಡಿರುತ್ತಾರೆ. | No Comments. |
| 3. ಶಿಸ್ತು ಪ್ರಾಧಿಕಾರಿಗಳು ವಿಚಾರಣಾಧಿಕಾರಿಗಳು ಸಲ್ಲಿಸಲಾದ ವರದಿಯ ನಿರ್ಣಯವನ್ನು ನ್ಯಾಯಯುತವಾಗಿ ವಿಶ್ಲೇಷಿಸದೆ, ನೇರವಾಗಿ ಒಪ್ಪಿಕೊಂಡು ಉಲ್ಲೇಖಿತ (೩)ರ ಆದೇಶದಲ್ಲಿ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿ ೨೧೪ರ ನಿಯಮದಡಿಯಲ್ಲಿ ಕೆಳಕಂಡ ದಂಡನೆಗಳನ್ನು ವಿಧಿಸಲಾಗಿದೆ.<br>i) ಸರ್ಕಾರಕ್ಕೆ ನಷ್ಟವಾಗಿರುವ ರೂ.೧,೬೩,೯೦೦/-(ಒಂದು ಲಕ್ಷದ ಅರವತ್ತಮೂರು ಸಾವಿರದ ಒಂಭತ್ತು ನೂರು ರೂಪಾಯಿಗಳು ಮಾತ್ರ)ವನ್ನು ನಿವೃತ್ತಿ ಸೌಲಭ್ಯದಿಂದ ವಸೂಲು ಮಾಡುವುದು ಹಾಗೂ ಮಾಸಿಕ ವಿಶ್ರಾಂತಿ ವೇತನದಿಂದ ನಿರಂತರವಾಗಿ ರೂ.೫೦೦/-(ಐದು ನೂರು ರೂಪಾಯಿಗಳು ಮಾತ್ರ)ಗಳನ್ನು ಕಡಿತಗೊಳಿಸುವುದು. | It is not correct to say that disciplinary authority has imposed penalty without judiciously analysing the report. The report of enquiry has been thoroughly examined before awarding the punishment. |
| 4) ಶಿಸ್ತು ಪ್ರಾಧಿಕಾರಿಗಳು ನನಗೆ ದಂಡನೆಯನ್ನು ವಿಧಿಸುವ ಮುನ್ನ ಕೆಳಕಂಡ ಅಂಶಗಳನ್ನು ಪರಿಗಣಿಸಿದೆ ದಂಡನೆ ವಿಧಿಸಿರುವುದು ನ್ಯಾಯಯುತವಾದುದಲ್ಲ. (೧) ನನ್ನ ವಿರುದ್ಧ ಮೂರು ಆರೋಪಗಳನ್ನು ಮಾಡಲಾಗಿದ್ದು ಈ ಮೂರು ಆರೋಪಗಳ ಪೈಕಿ ೨ ಮತ್ತು ೩ನೇ ಆರೋಪಗಳು ಭಾಗಶ: ಸಾಬೀತಾಗಿದೆಯೆಂದು ವಿಚಾರಣಾಧಿಕಾರಿಗಳು ನಿರ್ಣಯ ನೀಡಿರುತ್ತಾರೆ.<br>a) ದೋಷಾರೋಪಣೆಯ ಅನುಬಂಧ-೧ ಮತ್ತು ೨ರಲ್ಲಿ ನಾನು ಶ್ರೀ ಕೆ.ಎಸ್.ಗಣೇಶಬಾಬು, ವ್ಯವಸ್ಥಾಪಕರು, ಉಪ ನಿರ್ದೇಶಕರ ಕಛೇರಿ, ಸಾರ್ವಜನಿಕ ಶಿಕ್ಷಣ ಇಲಾಖೆ, ಚಾಮರಾಜನಗರ ಇವರು ದಿನಾಂಕ ೨೨.೩.೨೦೦೦ ರಿಂದ ೧.೪.೨೦೦೧ರ ಅವಧಿಯಲ್ಲಿ ರಜೆಯ ಮೇಲಿದ್ದ ಅವಧಿಯಲ್ಲಿ ನಾನು ಈ ಹೆಚ್ಚುವರಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸಿದ ಅವಧಿಯಲ್ಲಿ ಆರೋಪಗಳನ್ನು ಎಸಗಿರುವುದಾಗಿ ಆರೋಪಿಸಿದೆ.<br>ಶ್ರೀ ಶೇಷಗಿರಿರಾವ್ ಇವರನ್ನು ಪ್ರಭಾರ ಅವಧಿಗೆ ಸಂಬಂಧಿಸಿದಂತೆ ಪಾಟಿ ಸವಾಲಿನಲ್ಲಿ ಪ್ರಶ್ನಿಸಿದಾಗ ಶ್ರೀ ಕೆ.ಎಸ್. ಗಣೇಶಬಾಬು, ವ್ಯವಸ್ಥಾಪಕರು ದಿನಾಂಕ: ೨೨.೩.೨೦೦೦ ರಿಂದ ೧.೪.೨೦೦೦ರ ಅವಧಿಯಲ್ಲಿ ರಜೆಯ ಮೇಲಿದ್ದರೆಂದು ಸದರಿ ಅವಧಿಯಲ್ಲಿ ನಾನು ಹೆಚ್ಚುವರಿ ಹುದ್ದೆಯಾದ ಪತ್ರಾಂಕಿತ ವ್ಯವಸ್ಥಾಪಕರ ಹುದ್ದೆಯಲ್ಲಿ ಕಾರ್ಯ ನಿರ್ವಹಿಸಿರುತ್ತೇನೆಂದು ಹೇಳಿಕೆ ನೀಡಿರುವುದನ್ನು ವಿಚಾರಣಾಧಿಕಾರಿಗಳು ಗಣನೆಗೆ ತೆಗೆದುಕೊಳ್ಳದೆ ಇರುವುದು ಗಮನಾರ್ಹವಾದ ಅಂಶವಾಗಿರುತ್ತದೆ. ಈ ಅಂಶದ ಬಗ್ಗೆ ಶ್ರೀ ಕೆ.ಎಸ್. ಗಣೇಶಬಾಬು, ವ್ಯವಸ್ಥಾಪಕರು ದಿನಾಂಕ ೨೨.೩.೨೦೦೦ ರಿಂದ ೧.೪.೨೦೦೦ರ ಅವಧಿಯಲ್ಲಿ ರಜೆಯ ಮೇಲೆ ಇದ್ದುದಾಗಿ ಅವರ ಸಾಕ್ಷ್ಯ ಹೇಳಿಕೆಯಲ್ಲೂ ಸಹ ತಿಳಿಸಿರುತ್ತಾರೆ.<br>b) ಸರ್ಕಾರದ ಪರ ಹೇಳಿಕೆ ನೀಡಲಾದ ಸರ್ಕಾರದ ಸಾಕ್ಷಿ ಗಳಾದ ಕೆ.ಎಸ್.ಗಣೇಶಬಾಬು, ವ್ಯವಸ್ಥಾಪಕರು ಇವರ ರಜೆಯ ಅವಧಿಯ ದಿನಾಂಕ ೨೨.೩.೨೦೦೦ ರಿಂದ ೧.೪.೨೦೦೦ರಲ್ಲಿ ನನಗೆ ಸದರಿ ಹುದ್ದೆಯ ಪ್ರಭಾರ ವಹಿಸಿಕೊಟ್ಟ ಬಗ್ಗೆ ಮಂಡನಾಧಿಕಾರಿಗಳು ಯಾವುದೇ ದಾಖಲೆಗಳನ್ನು/ಪುರಾವೆಯನ್ನು ವಿಚಾರಣೆಯ ವೇಳೆಯಲ್ಲಿ ಪ್ರದರ್ಶಿಸಿರುವುದಿಲ್ಲದಿರುವುದನ್ನು ಪರಿಗಣಿಸಬಹುದಾಗಿದೆ.<br>c) ಆರೋಪ ೨ ಮತ್ತು ೩ರಲ್ಲಿ ೨೨.೩.೨೦೦೦ ರಿಂದ ೧.೪.೨೦೦೦ರ ಅವಧಿಯಲ್ಲಿ ಅವ್ಯವಹಾರ ನಡೆದಿದೆ ಎಂದು ಆರೋಪಿಸಿದೆ. ಆದರೆ ೨/೯೯ ರಿಂದ ೮/೯೯ರ ಅವಧಿಯಲ್ಲಿ ನಡೆದ ವಹಿವಾಟನ್ನು ಆಧರಿಸಿ ನನ್ನನ್ನು ಅಪರಾಧಿಯೆಂದು ಪರಿಗಣಿಸಿ ಸದರಿ ಆರೋಪಗಳಲ್ಲಿ ಭಾಗಶ: ಸಾಭೀತಾಗಿದೆಯೆಂದು ವಿಚಾರಣಾಧಿಕಾರಿಗಳು ನಿರ್ಣಯಿಸಿರುವುದು ನ್ಯಾಯಯುತವಾಗಿ ರುವುದಿಲ್ಲ.<br>d) ಸರ್ಕಾರಿ ನೌಕರರ ವಿರುದ್ಧ ಮಾಡಲಾದ ಆರೋಪಗಳನ್ನು ಸಾಬೀತು ಪಡಿಸುವ ಪೂರ್ಣ ಜವಾಬ್ದಾರಿ ಶಿಸ್ತು ಪ್ರಾಧಿಕಾರಿಗಳಿಗೆ ಸಂಬಂಧಿತವಾಗಿರುತ್ತದೆ. ಆದರೆ ಸರ್ಕಾರದ ಪರ ಸಾಕ್ಷಿ ಹೇಳಿಕೆ ನೀಡಲಾದ ಯಾವುದೇ ಸಾಕ್ಷಿದಾರರು ೧೭ ಚೆಕ್‌ಗಳ ಪೈಕಿ ೮ ಚೆಕ್ ಗಳ ಒಟ್ಟು ಮೊಬಲಗು ರೂ. ೫೩,೯೦೦/-ಗಳನ್ನು ಮತ್ತು ೭ನೇ ತರಗತಿಯ ಪರೀಕ್ಷೆಗಾಗಿ ಡ್ರಾ ಮಾಡಲಾದ ಮುಂಗಡ ಒಟ್ಟು ರೂ. ೧,೧೦,೦೦೦/-ಗಳನ್ನು ನಾನು, ಕೆನರಾ ಬ್ಯಾಂಕ್ ಖಾತೆ ಸಂಖ್ಯೆ:೨೧೪೯೨ರಲ್ಲಿ ಹಣ ಪಡೆದ ಬಗ್ಗೆ ಆಧಾರ ಸಹಿತ ಹೇಳಿಕೆ ನೀಡಿಲ್ಲದಿರುವುದನ್ನು ಪರಿಗಣಿಸ ಬಹುದಾಗಿದೆ. | In this para the applicant has denied the charges against him but has not adduced any evidence in his defence. His averment that he worked only as incharge Gazetted Assistant cannot absolve him from his responsibility. Therefore, no credence can be given to his arguments.<br>Some of the cheques have been encashed in the name of the appellent. Therefore, his statement that he has merely recorded the entries in the cash book is not correct. Therefore, case laws quoted by him also does not apply to him. Therefore, the appellent has failed to offer substantive grounds of appeal in his defence. Hence none of the contention of the appellent is justified and therefore his appeal petition is liable to be dismissed. |

| Para Nos. | Remarks |
|---|---|
| i) ಕರ್ನಾಟಕ ಉಚ್ಛ ನ್ಯಾಯಾಲಯದ ೧೯೬೯(೨) ಎಂ.ವೈ.ಎಸ್.ಎಲ್.ಜೆ. ೪೨೩ರ ಮೊಕದ್ದಮೆ ಎಸ್.ನಾರಾಯಣರಾವ್ v/s ಮೈಸೂರು ರಾಜ್ಯ ಇವರ ತೀರ್ಪಿನಲ್ಲಿ ಸರ್ಕಾರಿ ನೌಕರನಿಗೆ ನಗದು ವಹಿವಾಟನ್ನು ವಹಿಸಿಕೊಟ್ಟಲ್ಲಿ ಮಾತ್ರ ಅವನು ನಿರ್ವಹಿಸಿದ ಅವಧಿಯಲ್ಲಿ ನಡೆದ ವಹಿವಾಟಿಗೆ ಜವಾಬ್ದಾರರಾಗುತ್ತಾರೆ. ನಗದು ಪುಸ್ತಕ ಬರೆದ ಮಾತ್ರಕ್ಕೆ ಸದರಿ ವಹಿವಾಟಿಗೆ ಜವಾಬ್ದಾರನಾಗುವುದಿಲ್ಲ. | |
| ii) ಸರ್ವೋಚ್ಛ ನ್ಯಾಯಾಲಯ ಇವರು ಮೊಕದ್ದಮೆ ಸಂಖ್ಯೆ:ಎ.ಐ. ಆರ್. ೧೯೬೨ ತ್ರಿಪುರ ೧೫ ಸುಕುಂದ್ರ ಚಂದ್ರ v/s ಯೂನಿಯನ್ ಟೆರಿಟರಿ ತ್ರಿಪುರ ತೀರ್ಪಿನಲ್ಲಿ ಆರೋಪಗಳನ್ನು ದಾಖಲೆಗಳ ಪ್ರಕಾರ ಸಾಬೀತುಪಡಿಸುವುದರ ಜವಾಬ್ದಾರಿ ಶಿಸ್ತು ಪ್ರಾಧಿಕಾರಕ್ಕೆ ಸಂಬಂಧಿತವಾಗಿರುತ್ತದೆ. ಆಪಾದಿತ ನೌಕರರ ಮುಗ್ಧತೆಯ ಆಧಾರದ ಮೇಲೆ ಆಪಾದಿತ ಎಂದು ಪರಿಗಣಿಸಲು ಬರುವುದಿಲ್ಲವೆಂದು ನೀಡಲಾದ ತೀರ್ಪನ್ನು ಪರಿಗಣಿಸಬಹುದಾಗಿದೆ. | |
| iii) ನಾನು ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಚಾಮರಾಜ ನಗರ ಕಚೇರಿಯಲ್ಲಿ ಅಧೀಕ್ಷಕನಾಗಿ ದಿನಾಂಕ:೧.೭.೧೯೯೮ ರಿಂದ ೩೧.೧೦.೨೦೦೧ರವರೆಗೆ ಕಾರ್ಯ ನಿರ್ವಹಿಸಿರುತ್ತೇನೆ. ನಾನು ಸದರಿ ಅವಧಿಯಲ್ಲಿ ಆಡಳಿತ ವಿಭಾಗದ ಮೇಲ್ವಿಚಾರಕನಾಗಿ ಕಾರ್ಯನಿರ್ವಹಿಸಿರುತ್ತೇನೆ. ಆದರೆ ಕೆಳಕಂಡ ಚೆಕ್‌ಗಳ ಮೂಲಕ ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಚಾಮರಾಜನಗರ ಇವರು ಕೆನರಾ ಬ್ಯಾಂಕ್ ಖಾತೆ ಸಂಖ್ಯೆ:೨೧೯೮೨ರಲ್ಲಿ ವೈಯಕ್ತಿಕವಾಗಿ ಡ್ರಾ ಮಾಡಿರುವುದನ್ನು ನಗದು ಪುಸ್ತಕದಲ್ಲಿ ದಾಖಲಾರಿಸಿದೆ ಎಂದ ಒಂದೇ ಕಾರಣಕ್ಕಾಗಿ ಆ ನನ್ನ ವಿರುದ್ಧ ಮಾಡಲಾದ ಆರೋಪಗಳು ಭಾಗಶ: ಸಾಬೀತಾಗಿದೆಯೆಂದು ನಿರ್ಣಯಿಸಿ ನೀಡಲಾದ ವರದಿಯನ್ನು ಶಿಸ್ತು ಪ್ರಾಧಿಕಾರಿಗಳು ಒಪ್ಪಿಕೊಂಡು ದಂಡನೆ ನೀಡಿರುವುದು ನ್ಯಾಯಯುತವಾಗಿರುವುದಿಲ್ಲವೆಂದು ಪರಿಗಣಿಸಬಹುದಾಗಿದೆ. | |
| iv) ವಿಚಾರಣಾಧಿಕಾರಿಗಳು ನನ್ನ ವಿರುದ್ಧ ಮಾಡಲಾದ ಆರೋಪ (೨) ಮತ್ತು (೩) ಭಾಗಶ: ಸಾಬೀತಾಗಿರುವುದೆಂದು ನಿರ್ಣಯ ನೀಡಿರುತ್ತಾರೆ. ಒಟ್ಟು ೧೭ ಚೆಕ್ಕುಗಳ ಪೈಕಿ ೮ ಚೆಕ್‌ಗಳು ಡ್ರಾ ಮಾಡಲಾದ ಒಟ್ಟು ಮೊತ್ತ ರೂ.೫೩,೯೦೦/-ಗಳಿಗೆ ಮತ್ತು ೭ನೇ ತರಗತಿಯ ಪರೀಕ್ಷೆಗೆ ಮುಂಗಡ ಡ್ರಾ ಮಾಡಲಾದ ಒಟ್ಟು ಮೊತ್ತ ರೂ.೧,೧೦,೦೦೦/-ಗಳಿಗೆ ವೋಚರ್‌ಗಳನ್ನು ಸಲ್ಲಿಸಲಿಲ್ಲವೆಂಬ ಕಾರಣಕ್ಕಾಗಿ ಆರೋಪ ಸಾಬೀತಾಗಿದೆ ಎಂದು ನಿರ್ಣಯಿಸಿರುವುದು ನ್ಯಾಯಯುತವಾಗಿ ರುವುದಿಲ್ಲ. ಆರೋಪಿತ ನೌಕರನಾದ ನಾನು ಕೇವಲ ೨೨.೩.೨೦೦೦ ರಿಂದ ೧.೪.೨೦೦೦ರವರೆಗೆ ಅಂದರೆ ೧೧ ದಿನಗಳು ಮಾತ್ರ ವ್ಯವಸ್ಥಾಪಕರ ಹೆಚ್ಚಿನ ಹುದ್ದೆಯಲ್ಲಿ ಉಪ ನಿರ್ದೇಶಕರ ಮೌಖಿಕ ಆದೇಶದ ಮೇರೆಗೆ ಕಾರ್ಯನಿರ್ವಹಿಸಿರುತ್ತೇನೆ. ಆದರೆ ಆರೋಪಕ್ಕೆ ಸಂಬಂಧಿಸಿದ ಚೆಕ್‌ಗಳು ೧೯೯೯ರ ಅವಧಿಗೆ ಸಂಬಂಧಿಸಿದೆ. ಈ ಅವಧಿಯಲ್ಲಿ ನಾನು ಲೆಕ್ಕ ವಿಭಾಗದಲ್ಲಿ (ನಗದು ವಿಭಾಗದಲ್ಲಿ) ಕಾರ್ಯನಿರ್ವಹಿಸಿರುವುದಿಲ್ಲ. ಆದರೆ ಮೇಲಾಧಿಕಾರಿಗಳ ಮೌಖಿಕ ನಿರ್ದೇಶನದಂತೆ ನಗದು ಪುಸ್ತಕ ಬರೆದಿದೆ ಎಂಬ ಮಾತ್ರಕ್ಕೆ ನನ್ನ ವಿರುದ್ಧ ಮಾಡಲಾದ ಆರೋಪ ಸಾಬೀತಾಗಿದೆಯೆಂದು ನಿರ್ಣಯಿಸಿರುವುದನ್ನು ಪರಿಗಣಿಸಬಹುದಾಗಿದೆ. | |
| v) ವಿಚಾರಣಾಧಿಕಾರಿಗಳು ವಿಚಾರಣೆ ಮುಗಿದ ನಂತರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು ೧೯೫೭ರ ನಿಯಮ ೧೧(೧೭)(೧೮)ರಲ್ಲಿ ವಿವರಿಸಿರುವಂತೆ ನನ್ನನ್ನು ಯಾವುದೇ ಪ್ರಶ್ನೆಗಳನ್ನು ಕೇಳಿಲ್ಲದಿರುವುದನ್ನು ಗಮನಿಸಬಹುದಾದ ಅಂಶವಾಗಿರುತ್ತದೆ. ಇದರಿಂದ ಸಿ.ಸಿ.ಎ. ನಿಯಮಗಳನ್ನು ಉಲ್ಲಂಘಿಸಿದಂತಾಗಿರುತ್ತದೆ. | |

ಮೇಲ್ಕಂಡ ವಾಸ್ತವಾಂಶಗಳನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರವು ಈ ಕೆಳಕಂಡಂತೆ ಆದೇಶಿಸಿದೆ:

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 29 ಎಸ್‌ಇಎನ್ 2005 ಬೆಂಗಳೂರು, ದಿನಾಂಕ: 20ನೇ ಜೂನ್, 2005**

I have considered the appeal petitions submitted under rule 18 of KCS (CCA) Rules 1957 by – (1)Sri. R.J. Walikar, KAS against the Orders of Government as Disciplinary Authority imposing upon him the penalty of with holding three increments without cumulative effect vide Order No. DPAR 46 SEN 2001 dated 6.8.2004, and (2) Sri. Basha Sheriff, Office Superintendent (Retd.) Department of Public Instructions imposing upon him the penalty of recovery of Rs.1,63,900/- being the loss caused to Government and with holding pension to the extent of Rs.500/- per month permanently, vide Order No. DPAR 46 SEN 2001 dated 8.11.2004.

I have considered the appeal in the light of the contentions made in the appeal petitions of the appellants and the connected inquiry records and appeal records. Having gone through the appeal and the connected records of the case, I find that the charges against the appellants are established. The appellants have not brought forth any new grounds to support their contentions. I therefore dismiss the appeals submitted by Sriyuths R.J. Walikar, KAS, and Basha Sheriff, Office Superintendent (Retd.) of the Department of Public Instructions and up hold the Orders of Government imposing penalty on them as Disciplinary Authority.

**T.N. CHATURVEDI**
Governor of Karnataka.
ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

ಪಿ.ಆರ್. 959

**ವಿಷಯ:** ಶ್ರೀ ಎಸ್.ಕೆ. ಲಕ್ಷ್ಮಣ್, ಕೆಎಎಸ್ ಅಧಿಕಾರಿ ಇವರ ವಿರುದ್ಧ ಶಿಸ್ತು ಕ್ರಮ -ಆರೋಪ ಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 101 ಎಸ್‌ಇಎನ್ 2000 ದಿನಾಂಕ: 20.01.2001.
2. ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಮಧ್ಯಂತರ ಆದೇಶ ದಿನಾಂಕ: 22.01.2001.
3. ಸರ್ಕಾರದ ನೋಟೀಸ್ ಸಂಖ್ಯೆ: ಸಿಆಸುಇ 101 ಎಸ್‌ಇಎನ್ 2000 ದಿನಾಂಕ: 28.12.2004.
4. ಕರ್ನಾಟಕ ಆಡಳಿತ ನ್ಯಾಯಮಂಡಳಿಯ ಅಂತಿಮ ಆದೇಶ ದಿನಾಂಕ: 08.12.2004.
5. ಶ್ರೀ ಎಸ್.ಕೆ. ಲಕ್ಷ್ಮಣ್, ಕೆಎಎಸ್ ಅಧಿಕಾರಿ ಅವರ ದಿನಾಂಕ: 28.01.2005ರ ಉತ್ತರ.

**ಪ್ರಸ್ತಾವನೆ:**

ಶ್ರೀ ಎಸ್.ಕೆ. ಲಕ್ಷ್ಮಣ್, ಕೆಎಎಸ್ ಅಧಿಕಾರಿ ಅವರು ದಿನಾಂಕ 29.11.99 ರಿಂದ 14.9.01 ರವರೆಗೆ ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರಾಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಬೆಂಗಳೂರು ಸಿಟಿ ಗೃಹ ನಿರ್ಮಾಣ ಸಹಕಾರ ಸಂಘದ ಪರವಾಗಿ ಬೆಂಗಳೂರು ದಕ್ಷಿಣ ತಾಲ್ಲೂಕು ಉತ್ತರಹಳ್ಳಿ, ಹೋಬಳಿ, ವಾಜರಹಳ್ಳಿ ಗ್ರಾಮದಲ್ಲಿನ ಭೂ ಸ್ವಾಧೀನಕ್ಕೆ ಸಂಬಂಧಿಸಿದಂತೆ ತ್ರಿ-ಸದಸ್ಯ ಸಮಿತಿಯು ನೀಡಿರುವ ವರದಿಯನ್ನು ಭೂ ಮಾಲೀಕರಾದ ಶ್ರೀಮತಿ ಸೀತಾದೇವಿ ಷಾ ಇವರು ಸರ್ವೋಚ್ಛ ನ್ಯಾಯಾಲಯದಲ್ಲಿ ಸಲ್ಲಿಸಿದ ಎಸ್.ಎಲ್.ಪಿ ಸಂಖ್ಯೆ: 5208-09/2000ರ ಸಂಬಂಧದಲ್ಲಿ ಹಾಜರುಪಡಿಸಲು ಸರ್ವೋಚ್ಛ ನ್ಯಾಯಾಲಯವು ಆದೇಶ ಮಾಡಿದ್ದರ ಮೇರೆಗೆ ತ್ರಿ-ಸದಸ್ಯ ಸಮಿತಿಯ ವರದಿಯು ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ಲಭ್ಯವಿಲ್ಲವೆಂದು ನಿರ್ಲಕ್ಷತೆಯಿಂದ ಸರ್ಕಾರಕ್ಕೆ ವರದಿ ನೀಡಿ ದುರ್ನಡತೆ ಎಸಗಿದ್ದರಿಂದ ಸರ್ಕಾರವು ಭಾರತದ ಸರ್ವೋಚ್ಛ ನ್ಯಾಯಾಲಯದ ಮುಂದೆ ಪೇಚಿಗೆ ಸಿಲುಕುವಂತಾಗಿ, ಆ ಸಂಬಂಧ ಸರ್ವೋಚ್ಛ ನ್ಯಾಯಾಲಯವು ಸಂಬಂಧಪಟ್ಟ ಅಧಿಕಾರಿ ವಿರುದ್ಧ ಸೂಕ್ತ ಕ್ರಮ ಕೈಗೊಳ್ಳುವಂತೆ ಆದೇಶಿಸಿದ್ದರ ಮೇರೆಗೆ ಶ್ರೀ ಎಸ್.ಕೆ. ಲಕ್ಷ್ಮಣ್, ಕೆಎಎಸ್ ಅಧಿಕಾರಿ ಅವರನ್ನು ಮೇಲೆ (1)ರಲ್ಲಿ ಓದಲಾದ ದಿನಾಂಕ 20.1.2001ರ ಆದೇಶದಲ್ಲಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಲಾಯಿತು.

ಶ್ರೀ ಎಸ್.ಕೆ. ಲಕ್ಷ್ಮಣ್ ಅವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಮೇಲ್ಕಂಡ ಆದೇಶವನ್ನು ಅರ್ಜಿ ಸಂಖ್ಯೆ: 801/2001ರಲ್ಲಿ ಪ್ರಶ್ನಿಸಿದ್ದರ ಮೇರೆಗೆ ಆಡಳಿತ ನ್ಯಾಯ ಮಂಡಳಿಯು ಮೇಲೆ (2)ರಲ್ಲಿ ಓದಲಾದ ದಿನಾಂಕ: 22.01.2001ರ ಮಧ್ಯಂತರ ಆದೇಶದಲ್ಲಿ ಸರ್ಕಾರದ ಅಮಾನತ್ತು ಆದೇಶಕ್ಕೆ ತಡೆಯಾಜ್ಞೆ ನೀಡಿತ್ತು. ಈ ಕಾರಣ ಸರ್ಕಾರದ ಅಮಾನತ್ತು ಆದೇಶವನ್ನು ಜಾರಿಗೊಳಿಸಲು ಸಾಧ್ಯವಾಗಿರುವುದಿಲ್ಲವಾದ್ದರಿಂದ ಆಪಾದಿತ ಅಧಿಕಾರಿಯು ಸೇವೆಯಲ್ಲಿ ಮುಂದುವರೆದಿರುತ್ತಾರೆ. ತದನಂತರ ಅವರಿಗೆ ಮೇಲೆ (3)ರಲ್ಲಿ ಓದಲಾದ ದಿನಾಂಕ: 28.12.2004ರಂದು ನೋಟೀಸಿನೊಂದಿಗೆ ದೋಷಾರೋಪಣೆಗಳನ್ನು ಜಾರಿ ಮಾಡುವುದರ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಆರೋಪಿತ ಅಧಿಕಾರಿಯು ಸಲ್ಲಿಸಿದ ಅರ್ಜಿಯ ಕುರಿತಂತೆ ಮೇಲೆ (4)ರಲ್ಲಿ ಓದಲಾದ ದಿನಾಂಕ: 08.12.2004ರಂದು ಅಂತಿಮ ನಿರ್ಣಯವನ್ನು ನೀಡುತ್ತಾ ಈ ಕೆಳಕಂಡಂತೆ ನಿರ್ದೇಶಿಸಿರುತ್ತದೆ.

> Further, it is also pointed out by the learned counsel for both parties that the Three-Men Committee Report which was not available on the basis of which the impugned order of suspension was passed is subsequently traced and since the impugned order was based on the said material is no longer available to the Respondents, we are of the view that it is a fit case where the Respondents are required to have a re-look/reconsideration of the entire sequence of events that lead to the order of suspension.
>
> In the said view of the matter, the application is disposed of with a direction to the Respondents to review/reconsider the order of suspension dated 20.01.2001 and pass appropriate orders in accordance with law within 3 months from the date a copy of this order is received by the Respondents.
>
> Till then, the interim order granted by this Tribunal on 22.01.2001 shall be continued.

ಈ ಮಧ್ಯೆ ಆಪಾದಿತರು ಸಹ ಸರ್ಕಾರದ ನೋಟೀಸಿಗೆ ಮೇಲೆ (5)ರಲ್ಲಿ ಓದಲಾದ ದಿನಾಂಕ 28.01.2005ರಂದು ಉತ್ತರ ಸಲ್ಲಿಸಿ, ಅವರ ಮೇಲಿನ ಆರೋಪಗಳನ್ನು ನಿರಾಕರಿಸಿರುತ್ತಾರೆ. ಅವರ ಹೇಳಿಕೆಯಲ್ಲಿ ಪ್ರಶ್ನಿತ ಕಡತವನ್ನು ಪತ್ತೆ ಹಚ್ಚಲು ಎಲ್ಲಾ ಪ್ರಯತ್ನಗಳನ್ನು ಮಾಡಲಾಗಿತ್ತೆಂದು, ಆದರೂ ಅದು ಸಕಾಲದಲ್ಲಿ ಲಭ್ಯವಾಗಿಲ್ಲವೆಂದು ಈ ಸಂಬಂಧ ವಿಶೇಷ ಪ್ರಯತ್ನಗಳನ್ನು ಮಾಡಲು ಅವರ ಕಛೇರಿಯ 10 ನೌಕರರ ವೃಂದವನ್ನು ರಚಿಸಿ ಅವರಿಗೆ ಸದರಿ ಜವಾಬ್ದಾರಿಯನ್ನು ನೀಡಿ ಅದನ್ನು ದಾಖಲು ಕೋಣೆಯಲ್ಲಿ ದಿನಾಂಕ 13.11.2000 ರಂದು ಮಧ್ಯಾಹ್ನ 3.00 ಗಂಟೆಗೆ ಪತ್ತೆ ಹಚ್ಚಲು ಯಶಸ್ವಿಯಾಗಿರುತ್ತೇನೆಂದು ತಿಳಿಸಿರುತ್ತಾರೆ. ಈ ರೀತಿ ಪತ್ತೆ ಹಚ್ಚಿದ ಕಡತವನ್ನು ದಿನಾಂಕ:14.11.2000 ರಂದೇ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆಗೆ ತಲುಪಿಸಿರುತ್ತೇನೆಂದು ಮನವಿ ಮಾಡುತ್ತಾ, ಹೀಗಾಗಿ ತಮ್ಮ ಮೇಲಿನ ಶಿಸ್ತು ಕ್ರಮವನ್ನು ಕೈಬಿಡಲು ಕೋರಿದ್ದಾರೆ.

ಮೇಲೆ ವಿವರಿಸಿದ ಕರ್ನಾಟಕ ನ್ಯಾಯ ಮಂಡಳಿಯ ತೀರ್ಪಿನ ಹಿನ್ನೆಲೆಯಲ್ಲಿ ಹಾಗೂ ಆಪಾದಿತ ಅಧಿಕಾರಿಯವರ ವಿವರಣೆಯನ್ನು ಪರಿಶೀಲಿಸಲಾಗಿ ತ್ರಿ-ಸದಸ್ಯ ಸಮಿತಿಯ ವರದಿಯು 1985ನೇ ಸಾಲಿನಲ್ಲಿ ನೀಡಿರುವುದು ಕಂಡು ಬರುತ್ತದೆ. ಈ ಅಧಿಕಾರಿಯು ಬೆಂಗಳೂರು ನಗರ ಜಿಲ್ಲಾಧಿಕಾರಿಗಳ ಕಛೇರಿಯಲ್ಲಿ ದಿನಾಂಕ 29.11.1999 ರಿಂದ 14.09.2001ರವರೆಗೆ ಕಾರ್ಯ ನಿರ್ವಹಿಸಿದ್ದು, ಸದರಿ ಕಡತವನ್ನು ಅಂದಿನ ಕಛೇರಿ ಸಹಾಯಕರು ಭೂ ಸ್ವಾಧೀನ ಕಛೇರಿಯ ಮೂಲಕ ಕಳುಹಿಸದೇ ನೇರವಾಗಿ ದಾಖಲು ಕೋಣೆಗೆ ಕಳುಹಿಸಿದ್ದರಿಂದ ಕಡತದ ಚಲನವನ್ನು ತಿಳಿಯಲು ಗೊಂದಲವಾಗಿ ಈ ವಿಳಂಬವಾಗಿರುವುದು ಗೋಚರವಾಗುತ್ತದೆ. ಇವರನ್ನು ಅಮಾನತ್ತಿನಲ್ಲಿರಿಸಿ ಹೊರಡಿಸಿದ ಆದೇಶವನ್ನು ಸಹ ಜಾರಿಗೊಳಿಸದೇ ಇದ್ದುದರಿಂದ ಸದರಿ ಆದೇಶವೂ ಸಹ ನಿಷ್ಕ್ರಿಯೆಯಾಗಿರುವುದು ಕಂಡು ಬರುತ್ತದೆ. ಸರ್ವೋಚ್ಚ ನ್ಯಾಯಾಲಯವು ತ್ರಿ-ಸದಸ್ಯ ಸಮಿತಿಯ ವರದಿಯ ಕಡತ ಕಳೆದುಹೋಗಲು ಕಾರಣರಾದ ಸಿಬ್ಬಂದಿಯ ವಿರುದ್ಧ ಶಿಸ್ತು ಕ್ರಮಕೈಗೊಳ್ಳಲು ಆದೇಶಿಸಲಾಗಿತ್ತು. ಆದರೆ ಈ ಕಡತವನ್ನು ನಂತರ ಪತ್ತೆಹಚ್ಚಿ ನ್ಯಾಯಾಲಯಕ್ಕೆ ಸಲ್ಲಿಸಿರುವುದನ್ನು, ಆಡಳಿತ ನ್ಯಾಯಮಂಡಳಿಯ ತೀರ್ಮಾನವನ್ನು ಮತ್ತು ಲಭ್ಯವಿರುವ ಸಾಕ್ಷ್ಯಾಧಾರಗಳನ್ನು ಗಣನೆಗೆ ತೆಗೆದುಕೊಂಡು ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 101 ಎಸ್ಇಎನ್ 2000, ಬೆಂಗಳೂರು ದಿನಾಂಕ: 5ನೇ ಜುಲೈ, 2005.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಸರ್ಕಾರವು ಶ್ರೀ ಎಸ್.ಕೆ. ಲಕ್ಷ್ಮಣ್, ಕೆಎಎಸ್ ಅಧಿಕಾರಿ ಅವರ ವಿರುದ್ಧ ದಿನಾಂಕ 28.12.2004ರ ನೋಟೀಸಿನಲ್ಲಿ ಮಾಡಲಾದ ಆರೋಪದಿಂದ ಆರೋಪ ಮುಕ್ತರನ್ನಾಗಿಸುತ್ತದೆ. ಹಾಗೂ ಸರ್ಕಾರದ ಸಮಸಂಖ್ಯೆಯ ದಿನಾಂಕ 20.01.2001ರ ಅಮಾನತ್ತು ಆದೇಶವನ್ನು ಹಿಂತೆಗೆದುಕೊಳ್ಳುತ್ತದೆ.

ಈ ಪ್ರಕರಣಕ್ಕೆ ಸೀಮಿತಗೊಂಡಂತೆ, ಈ ಇಲಾಖಾ ವಿಚಾರಣೆಯು ನಡೆಯದಿದ್ದಲ್ಲಿ ಸದರಿಯವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

ಪಿ.ಆರ್. 962

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಸಿ.ಎಸ್.ಧರಣೇಂದ್ರ, ಮಾಜಿ ಪಿಸಿ 180, ಕೆಎಸ್ಆರ್‌ಪಿ ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 8ನೇ ಪಡೆ, ಕೆಎಸ್ಆರ್‌ಪಿ ಶಿವಮೊಗ್ಗ ಇವರ ಆದೇಶ ಸಂಖ್ಯೆಸಿಬ್ಬಂದಿ/2/ಡಿಇ-5/ 1999-2000. ದಿನಾಂಕ:18-01-2000.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್ಆರ್‌ಪಿ, ಬೆಂಗಳೂರು ಇವರ ಆದೇಶ ಸಂಖ್ಯೆ:9/ಅಪೀಲು/ 2000-01. ಓಬಿ ಸಂಖ್ಯೆ:7/2001-02 ದಿನಾಂಕ:17-05-2001.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:31-07-2004.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/ 2/50/ 2004. ದಿನಾಂಕ:31-01-2005.

**ಪ್ರಸ್ತಾವನೆ:**

ಶ್ರೀ ಸಿ.ಎಸ್.ಧರಣೇಂದ್ರ, ಮಾಜಿ ಪಿಸಿ 180, 8ನೇ ಪಡೆ, ಕೆಎಸ್ಆರ್‌ಪಿ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:**"1) ನೀವು ಕರ್ನಾಟಕ ರಾಜ್ಯ ಮೀಸಲು ಪೊಲೀಸ್ ಘಟಕದಲ್ಲಿ ದಿನಾಂಕ:22-12-89ರಂದು ಪೊಲೀಸ್ ಸೇವೆಗೆ ಭರ್ತಿಯಾಗಿ, 9 ವರ್ಷ, 6 ತಿಂಗಳು ಸೇವೆಯನ್ನು ಸಲ್ಲಿಸುತ್ತಿದ್ದೀರಿ. ಇಷ್ಟು ಅವಧಿಯ ಸೇವೆಯಲ್ಲಿ, ನೀವು ಒಟ್ಟು 12 ಬಾರಿ ಕರ್ತವ್ಯದಲ್ಲಿ ಗೈರುಹಾಜರಿ ಹಾಗೂ ರಜೆಯ ಮೇಲೆ ತೆರಳಿ, ಗೈರುಹಾಜರಿಯಾಗಿದ್ದು, ಹಾಗೂ ನೀವು ಮೇಲಿಂದ ಮೇಲೆ ಕರ್ತವ್ಯಕ್ಕೆ ಗೈರುಹಾಜರಾಗುವ ಪ್ರವೃತ್ತಿವುಳ್ಳವರೆಂದು ತೋರಿಸಿದ್ದೀರಿ. ಹಾಗೂ ಸರ್ಕಾರಕ್ಕೆ ಕರ್ತವ್ಯದಲ್ಲಿ ಪ್ರಾಮಾಣಿಕತೆ ಮತ್ತು ಸೇವಾ ಮನೋಭಾವನೆಯನ್ನು ತೋರಿಸದೆ ಇರುತ್ತೀರಿ."

2) "ನೀವು ಪೇದೆ ಸಂಖ್ಯೆ:180, ಸಿ.ಎಸ್.ಧರಣೇಂದ್ರ ದಿನಾಂಕ:17-11-1998 ರಿಂದ ಸಕ್ರಿಯವಾಗಿ ಕರ್ತವ್ಯಗಳಿಗೆ ಇಲ್ಲಿಯತನಕ ಅನಧಿಕೃತವಾಗಿ ಗೈರುಹಾಜರಿಯಾಗಿ ರಜೆಯ ಮೇಲೆ ತೆರಳಿ ಗೈರುಹಾಜರಿಯಾಗಿ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತನವನ್ನು ಕೋರಿ ಬೇಜವಾಬ್ದಾರಿಯಿಂದ ವರ್ತಿಸಿರುತ್ತಿರಿ."

3) "ನಿಮ್ಮಗಳ ಇರುವಿಕೆಯ ಬಗ್ಗೆ ಖಚಿತ ಮಾಹಿತಿಯನ್ನು ನೀಡದೇ ಕೇಂದ್ರ ಸ್ಥಾನವನ್ನು ಪೂರ್ವಾನುಮತಿ ಇಲ್ಲದೆ, ತ್ಯಜಿಸಿ ನಿಯಮ ಬಾಹಿರವಾಗಿ ವರ್ತಿಸಿರುತ್ತೀರಿ."

4) "ಪ್ರಸಕ್ತ ಯಾವುದೇ ರೀತಿಯ ರಜೆಯನ್ನು ಮಂಜೂರು ಮಾಡಿಕೊಳ್ಳದೇ, ಅತೀ ಹೆಚ್ಚು ದಿವಸಗಳನ್ನು ಅನಧಿಕೃತವಾಗಿ ಕರ್ತವ್ಯಕ್ಕೆ ಗೈರುಹಾಜರಿಯಾಗಿ/ರಜೆಯ ಮೇಲೆ ತೆರಳಿಗೈರುಹಾಜರಿಯಾಗಿ ಕಠಿಣ ಶಿಕ್ಷೆಗೆ ಬದ್ಧರಾಗಿರುವಿರಿ."

5) "ಸರ್ಕಾರದಿಂದ ಇತರ ಮೂಲಗಳಿಂದ ನೀಡಲಾಗಿದ್ದ ಕಿಟ್ ಸಾಮಗ್ರಿಗಳನ್ನು ಮತ್ತು ಸಾಲಗಳನ್ನು ಹಿಂದಿರುಗಿಸದೇ ಒರ್ವ ಸರ್ಕಾರಿ ನೌಕರನಿಗೆ ಸಾಮಾನ್ಯವಾಗಿ ಇರಬೇಕಾದ ಜವಾಬ್ದಾರಿಗಳನ್ನು ಉದಾಸೀನತೆ ಮಾಡಿರುವಿರಿ."

6) "ನೀವು ಯಾವುದೇ ಮುನ್ಸೂಚನೆ ನೀಡದೆ ಇದ್ದಕ್ಕಿದ್ದಂತೆ ಸರ್ಕಾರಿ ಕರ್ತವ್ಯಗಳಿಗೆ ದೀರ್ಘಕಾಲದವರೆಗೆ ಅನಧಿಕೃತ ಗೈರುಹಾಜರಿಯಾಗಿ ಸರ್ಕಾರಿ ಕರ್ತವ್ಯಗಳಿಗೆ ಅಡಚಣೆವುಂಟು ಮಾಡಿ ಸಮಸ್ಯೆಗಳನ್ನು ಉಂಟು ಮಾಡಿರುತ್ತೀರಿ."

ಮೇಲ್ಕಂಡ 6 ಆರೋಪಗಳ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿಯ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್ ಕೆಎಸ್ಆರ್‌ಪಿ, ಶಿವಮೊಗ್ಗ, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:18-01-2000ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್ಆರ್‌ಪಿ, ಬೆಂಗಳೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ:17-05-2001ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು 1989 ರಲ್ಲಿ ಸೇವೆಗೆ ಸೇರಿದ್ದು, ಇವರ ಸೇವೆಯ ಬಹು ಭಾಗವನ್ನು (1991 ರಿಂದ 1999 ರವರೆಗೆ) ಗೈರುಹಾಜರಿಯಲ್ಲಿ ಕಳೆದಿರುತ್ತಾರೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಲು ಯಾವುದೇ ಸಕಾರಣಗಳು ಇರುವುದಿಲ್ಲ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 154 ಪೊಸಿಇ 2004, ಬೆಂಗಳೂರು, ದಿನಾಂಕ: 21ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಾವಳಿ,1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಸಿ.ಎಸ್.ಧರಣೇಂದ್ರ ಮಾಜಿ ಪಿಸಿ 180, 8ನೇ ಪಡೇ, ಕೆಎಸ್ಆರ್‌ಪಿ ಶಿವಮೊಗ್ಗ ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ಗುಂಡೂರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 965

**ವಿಷಯ:** ಶ್ರೀ ಜೆ.ಎಲ್.ರಾಮಲಿಂಗೇಗೌಡ, ಸಿಪಿಐ ಹಾಲಿ ಡಿವೈ.ಎಸ್.ಪಿ ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ ಬೆಂಗಳೂರು ಇವರ ಆದೇಶ ಸಂಖ್ಯೆ:ಪನ್ಸಿ/ಡಿಇ/9, 2001-02. ಓಬಿ ಸಂಖ್ಯೆ:119/2001-02, ದಿನಾಂಕ:10-01-2002.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಆದೇಶ ಸಂಖ್ಯೆ:ಸಿಬಿ/8/22/2002-03. ದಿನಾಂಕ:15-06-2004.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:12-07-2004.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ/8/22/2003-04. ದಿನಾಂಕ:11-03-2005.

**ಪ್ರಸ್ತಾವನೆ:**

ಶ್ರೀ ಜೆ.ಎಲ್ ರಾಮಲಿಂಗೇಗೌಡ, ಸಿಪಿಐ, ಹಾಲಿ ಡಿವೈಎಸ್‌ಪಿ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965 ರ ನಿಯಮ 7 ರಡಿ ದೋಷರೋಪಣಾ ಪತ್ರ ಹೊರಡಿಸಿರುತ್ತಾರೆ.

**ದೋಷರೋಪಣೆ:** "ಪೊಲೀಸ್ ಅಧೀಕ್ಷಕರು, ಕೋಲಾರ ಜಿಲ್ಲೆ ರವರು ಮೆಮೊ ಸಂಖ್ಯೆ:ಹೈಕೋರ್ಟ್:ಡಿಸಿಆರ್‌ಬಿ61/2001, ದಿನಾಂಕ:07-08-2001ರಲ್ಲಿ ಉಚ್ಚ ನ್ಯಾಯಾಲಯದ ಕ್ರಿಮಿನಲ್ ಅಪೀಲು ಸಂಖ್ಯೆ: 413/96 ರಲ್ಲಿ ಹೊರಡಿಸಿರುವ ವಾರೆಂಟ್‌ಗಳನ್ನು ನಿಗದಿತ ಅವಧಿಯೊಳಗೆ ಕಾರ್ಯಗತಮಾಡಿ ವರದಿ ಮಾಡುವಂತೆ ತಿಳಿಸಿದ್ದು, ನೀವು ದಿನಾಂಕ:10-08-2001ರಂದು ಜ್ಞಾಪನ ಹಾಗೂ ವಾರೆಂಟ್‌ಗಳನ್ನು ಸ್ವೀಕರಿಸಿದ್ದು, ನಿಗದಿತ ಅವಧಿಯಲ್ಲಿ ಕಾರ್ಯಗತ ಮಾಡಿ ಆರೋಪಿಗಳನ್ನು ದಸ್ತಗಿರಿ ಮಾಡಿ ನ್ಯಾಯಾಲಯದ ಮುಂದೆ ಹಾಜರ್‌ಪಡಿಸಬೇಕಾದ ಅತಿ ಮುಖ್ಯವಾದ ಕರ್ತವ್ಯವನ್ನು ನಿರ್ವಹಿಸದೆ, ಹಾಗೂ ವಾರೆಂಟ್‌ಗಳನ್ನು ಕಾರ್ಯಗತಮಾಡದೇ ಇರುವ ಬಗ್ಗೆ ಮೇಲಾಧಿಕಾರಿಗಳಿಗೆ ವರದಿಯನ್ನು ಸಲ್ಲಿಸದೆ ನಿಗದಿತ ಸಮಯಕ್ಕೆ ವಾರೆಂಟ್‌ಗಳನ್ನು ನ್ಯಾಯಾಲಯಕ್ಕೂ ಸಹ ಹಿಂದಿರುಗಿಸದೆ, ನ್ಯಾಯಾಲಯದ ಕಾರ್ಯಕಲಾಪಗಳಿಗೆ ಅಡಚಣೆಯುಂಟಾಗಲು ಕಾರಣರಾಗಿ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನವೆಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರ ಹೊರಡಿಸಿ, ಅರ್ಜಿದಾರರು ಸಮಜಾಯಿಷಿ ನೀಡದಿರುವ ಕಾರಣ ಮೇಲ್ಮನವಿದಾರರ ಮೇಲಿನ ಆರೋಪದಲ್ಲಿ ನಿರ್ಲಕ್ಷತೆ ಮತ್ತು ಬೇಜವಾಬ್ದಾರಿತನ ರುಜುವಾಗಿದೆ ಎಂದು ಪರಿಗಣಿಸಿ, ಏಕಪಕ್ಷೀಯವಾಗಿ ನಿರ್ಣಯ ಕೈಗೊಂಡು ಶಿಸ್ತು ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು ಕೇಂದ್ರ ವಲಯ ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:10-01-2002ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಒಂದು ವಾರ್ಷಿಕ ವೇತನ ಮುಂಬಡ್ತಿಯನ್ನು ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆ ಆಗದಂತೆ ಒಂದು ವರ್ಷ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:15-06-2004ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಒಬ್ಬ ಜವಾಬ್ದಾರಿಯುತ ಅಧಿಕಾರಿಯಾಗಿದ್ದು, ವಾರೆಂಟ್ ಆಸಾಮಿಗಳಲ್ಲಿ ಒಬ್ಬರನ್ನಾದರೂ ಪತ್ತೆ ಹಚ್ಚಲು ಅಥವಾ ವಾರೆಂಟ್ ಜಾರಿ ಮಾಡಲು ವಿಫಲವಾಗಿದ್ದು, ಶಿಸ್ತು ಪ್ರಾಧಿಕಾರಿಯ ಸಮಜಾಯಿಷಿಗೆ ನೇರ ಉತ್ತರ ನೀಡದೆ, ಅನಾವಶ್ಯಕವಾಗಿ ಸಮುಚಿತ ಮಾರ್ಗದಲ್ಲಿ ಕಳುಹಿಸಿರುವುದು ವಿಳಂಬಕ್ಕೆ ಕಾರಣವಾಗಿ ರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಹಾಗೂ ಶಿಸ್ತು ಪ್ರಾಧಿಕಾರಿಯ ಸಮಜಾಯಿಷಿಗೆ ಉತ್ತರ ನೀಡದಿರುವುದು ಕಂಡು ಬರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 164 ಪೊಸಿಅ 2005, ಬೆಂಗಳೂರು, ದಿನಾಂಕ: 21ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿ) ನಿಯಮಾವಳಿ, 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜೆ.ಎಲ್. ರಾಮಲಿಂಗೇಗೌಡ, ಸಿಪಿಐ ಹಾಲಿ ಡಿವೈಎಸ್‌ಪಿ, ಎಸ್‌ಇ ಸಿಓಡಿ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ಗುಂಡೂರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 966

**ವಿಷಯ:** ಶ್ರೀ ಕೆ.ಸುಬ್ರಮಣ್ಯ, ಮಾಜಿ ಸಿಪಿಸಿ 304, ದಕ್ಷಿಣ ಕನ್ನಡ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ಆದೇಶ ಸಂಖ್ಯೆ:ಇವಿ/21, 89-90. ದಿನಾಂಕ:01-07-1991.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪಶ್ಚಿಮ ವಲಯ, ಮಂಗಳೂರು ಇವರ ಆದೇಶ ಸಂಖ್ಯೆ:ಸಿಬ್ಬಂದಿ, ಮೇಲ್ಮನವಿ/106/98-99. ದಿನಾಂಕ: 04-09-2000.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:08-05-2003.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/50 /2003-04. ದಿನಾಂಕ:14-11-2003.

**ಪ್ರಸ್ತಾವನೆ:**

ಶ್ರೀ ಕೆ.ಸುಬ್ರಹ್ಮಣ್ಯ, ಸಿಪಿಸಿ 304 ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:** "ದಿನಾಂಕ:07-07-1989ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾದುದು ಹಾಗೂ ಗೈರು ಹಾಜರಿಯ ಅವಧಿಯು 21 ದಿವಸಗಳಿಗೂ ಮೀರಿ ಕರ್ನಾಟಕ ಪೊಲೀಸ್ ಮ್ಯಾನುವೆಲ್ ನಿಯಮ 525 ರಂತೆ ಅಭಿತ್ಯಾಜಕರೆಂದು ಘೋಷಿಸಲು ಕಾರಣರಾಗಿ ಕರ್ತವ್ಯ ನಿರ್ಲಕ್ಷ್ಯ ತೋರಿಸಿರುವುದು."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿಯ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:01-07-1991ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರ್ದೇಶಕರು ಪಶ್ಚಿಮ ವಲಯ, ಮಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ:04-09-2000ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಅನುಕಂಪದ ಆಧಾರದ ಮೇಲೆ ಕರ್ತವ್ಯಕ್ಕೆ ನೇಮಕಗೊಂಡಿದ್ದು, ಕರ್ತವ್ಯಕ್ಕೆ ವರದಿ ಮಾಡಿಕೊಂಡು, ಕೇವಲ ನಾಲ್ಕುದಿನ ಮಾತ್ರ ಸೇವೆಗೆ ಹಾಜರಾಗಿ, ನಂತರ ಸೇವೆಯಿಂದ ವಜಾಗೊಳಿಸುವ ನೋಟಿಸು ಜಾರಿ ಮಾಡಿದ್ದರೂ ಸಹ ಸುಮ್ಮನಿದ್ದು, ವಜಾಗೊಂಡ ಹತ್ತು ವರ್ಷಗಳ ನಂತರ ಮೇಲ್ಮನವಿ ಸಲ್ಲಿಸಿರುವುದು ಕಂಡುಬರುತ್ತದೆ. ಸೇವೆಯಿಂದ ವಜಾಗೊಳಿಸುವ ನೋಟಿಸು ಜಾರಿ ಮಾಡಿದ್ದರೂ, ಸೇವೆಗೆ ಹಾಜರಾಗದೆ, ಅನಧಿಕೃತವಾಗಿ ಗೈರುಹಾಜರಾಗಿ ರುತ್ತಾರೆ. ಕರ್ತವ್ಯ ನಿರ್ವಹಿಸಬೇಕೆಂಬ ಇಚ್ಛೆ ಇದ್ದಲ್ಲಿ ನೇಮಿಸಿದ ಸರ್ಕಾರಿ ಸೇವೆಯನ್ನು ನಿಷ್ಠೆಯಿಂದ ನಿರ್ವಹಿಸಬೇಕಾಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯಕ್ಕೆ ಸೇರಿದ್ದು, ಅತೀವ ನಿರ್ಲಕ್ಷತೆ, ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿಯು ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿದ್ದು, ಈ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 103 ಪೊಸಿಅ 2005, ಬೆಂಗಳೂರು, ದಿನಾಂಕ: 21ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿ) ನಿಯಮಾವಳಿ, 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ಸುಬ್ರಹ್ಮಣ್ಯ, ಮಾಜಿ ಪಿಸಿ 304 ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ಗುಂಡೂರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 967

**ವಿಷಯ:** ಶ್ರೀ ರಾಜಕುಮಾರ್ ಸಿಪಿಸಿ ಇವರ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ **ಪೊಲೀಸ್ ಅಧೀಕ್ಷಕರು, ಬೀದರ ಇವರ** ಆದೇಶ ಸಂಖ್ಯೆ:7/ಡಿಇ/ಬೀ/2002 ದಿನಾಂಕ:01-09-2003. ಹಾಗೂ ಆದೇಶ ಪುಸ್ತಕ ಸಂಖ್ಯೆ:346/03.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ **ಮಹಾ ನಿರೀಕ್ಷಕರು, ಈಶಾನ್ಯ** ವಲಯ್ಯ ಗುಲಬರ್ಗಾ ಇವರ ಆದೇಶ ಸಂಖ್ಯೆ:ಅಪೀಲು/87/ಈವ/2003/ 5837 ದಿನಾಂಕ:03-12-2003 ಹಾಗೂ ಆದೇಶ ಪುಸ್ತಕ ಸಂಖ್ಯೆ:570 ಈವ/2003.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:10-02-2004.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಇವರ ಪತ್ರದ ಸಂಖ್ಯೆ:ಅಪೀಲು/2/8/2004. ದಿನಾಂಕ:22-05-2004.
5. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ/85/ ಸಿಎಸ್‌ಎಸ್/2004. ದಿನಾಂಕ:18-10-2004 ಮತ್ತು 10-03-2005.

**ಪ್ರಸ್ತಾವನೆ:**

ಶ್ರೀ ರಾಜಕುಮಾರ್, ಮಾಜಿ ಸಿಪಿಸಿ 1208 ಬೀದರ ನಗರ ಪೊಲೀಸ್ ಠಾಣೆ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರ ವಿರುದ್ದ, ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷಾರೋಪಣೆ:** "ಶ್ರೀ ರಾಜಕುಮಾರ ಸಿಪಿಸಿ-1208 ನಗರ ಪೊಲೀಸ್ ಠಾಣೆ ಬೀದರ ನೀವು ದಿನಾಂಕ:27-09-2001 ರಂದು ರಾತ್ರಿ 0020 ಘಂಟೆಯಲ್ಲಿ ಗಸ್ತು ನಂ.3 ರಲ್ಲಿ ಕರ್ತವ್ಯದ ಮೇಲಿದ್ದಾಗ ನಿಮ್ಮನ್ನು ಅಂದಿನ ಗಸ್ತು ಕರ್ತವ್ಯ ಚಕ್ಕಿಂಗ್ ಅಧಿಕಾರಿ ಪಿಐ, ಡಿಎಸ್‌ಪಿ ರವರು ಜೋತಿ ಕಾಲೋನಿಯಲ್ಲಿ **ಚೆಕ್** ಮಾಡಿದಾಗ ನೀವು ವಿಪರೀತ ಸರಾಯಿ ಕುಡಿದು ಅಮಲಿನಲ್ಲಿ ನಿಯಂತ್ರಣ ಕಳೆದುಕೊಂಡಿದ್ದು ಗಸ್ತು ಕರ್ತವ್ಯವೆಸಗದೇ ಕರ್ತವ್ಯ ಲೋಪ ಮಾಡಿದಾಗ ನಿಮ್ಮನ್ನು ಅಂದೆ ಜಿಲ್ಲಾ ಸರ್ಕಾರಿ ಆಸ್ಪತ್ರೆಯಲ್ಲಿ ವೈದ್ಯಕೀಯ ಪರೀಕ್ಷೆಗೆ ಒಳಪಡಿಸಿದ್ದು ಅಲ್ಲಿಯು ನೀವು ಅಸಭ್ಯವಾಗಿ ವರ್ತಿಸಿ ಸಿಕ್ಕಾಪಟ್ಟೆ ಗಲಾಟೆ ಮಾಡಿ ನಂತರ ನೂತನ ನಗರ ಠಾಣೆಯಲ್ಲಿ ಮತ್ತು ರೈಲ್ವೆ ನಿಲ್ದಾಣದಲ್ಲಿಯೂ ಅಸಭ್ಯವಾಗಿ ವರ್ತಿಸಿ ಶಿಸ್ತು ನಡಾವಳಿಕೆಗೆ ಭಂಗ ತಂದು ಗಂಬೀರವಾದ ಕರ್ತವ್ಯಲೋಪವೆಸಗಿರುತ್ತೀರಿ."

ಮೇಲ್ಕಂಡ ಆರೋಪವು ಮೇಲೆ ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿದ್ದು, ಅರ್ಜಿದಾರರ ಸಮಜಾಯಿಷಿಯನ್ನು ಪಡೆದ, ಶಿಸ್ತು ಪ್ರಾಧಿಕಾರಿ ಹಾಗೂ ಪೋಲೀಸ್ ಅಧೀಕ್ಷಕರು, ಬೀದರ ಇವರು ಅದನ್ನೊಪ್ಪದೆ, ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:01-09-2003ರ ಆದೇಶದಲ್ಲಿ ಅರ್ಜಿದಾರರನ್ನು ಆದೇಶ ಜಾರಿಗೊಂಡ ತಕ್ಷಣದಿಂದ ಸೇವೆಯಿಂದ ತೆಗೆದು ಹಾಕಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಮೇಲ್ಮನವಿಯನ್ನು, ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲಬರ್ಗಾ ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ:03-12-2003ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಅರ್ಜಿದಾರರ ಪರಿಷ್ಕರಣ ಮೇಲ್ಮನವಿಯನ್ನು, ಇಲಾಖಾ ವಿಚಾರಣಾ ದಾಖಲೆಗಳನ್ನು ಹಾಗೂ ಕಂಡಿಕಾವಾರು ಷರಾಗಳನ್ನು ಪರಿಶೀಲಿಸಿದ ನಂತರ ಅರ್ಜಿದಾರರು ಕರ್ತವ್ಯದ ಮೇಲಿದ್ದಾಗ ಕುಡಿದಿದ್ದರೆಂದು ವೈದ್ಯಕೀಯ ದಾಖಲೆಗಳು ದೃಢಪಡಿಸಿದ್ದರೂ, ಇವರು ಕರ್ತವ್ಯದಲ್ಲಿದ್ದಾಗ ಗಲಾಟೆ ಮಾಡಿರುವ ಬಗ್ಗೆ ಸಾಕ್ಷ್ಯಾಧಾರಗಳು ಇಲ್ಲದೆ ಇರುವುದರಿಂದ ಹಾಗೂ ಶಿಸ್ತು ಪ್ರಾಧಿಕಾರ ವಿಧಿಸಿರುವ ಸೇವೆಯಿಂದ ವಜಾ ಮಾಡಿರುವ ದಂಡನೆಯು ಅತೀ ಹೆಚ್ಚಿನದಾಗಿ -ರುವುದರಿಂದ, ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಮಾರ್ಪಡಿಸಲು, ಕರ್ನಾಟಕ ಲೋಕ ಸೇವಾ ಆಯೋಗದ ಅಭಿಪ್ರಾಯ ಪಡೆಯಲಾಗಿದೆ. ಈ ಅಭಿಪ್ರಾಯದನ್ವಯ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 25 ಪೊಸಿಅ 2004, ಬೆಂಗಳೂರು, ದಿನಾಂಕ: 21ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿ) ನಿಯಮಾವಳಿ, 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶಿಸ್ತು ಪ್ರಾಧಿಕಾರದ ಸಂಖ್ಯೆ:7/ಡಿಇ/ಬೀ/2002 ದಿನಾಂಕ:01-09-2003ರ ಆದೇಶವನ್ನು ಮಾರ್ಪಡಿಸಿ, ಅರ್ಜಿದಾರರಾದ ಶ್ರೀ ರಾಜಕುಮಾರ್ ಸಿಪಿಸಿ 1208 ಇವರಿಗೆ ಈ ಕೆಳಕಂಡ ದಂಡನೆ ವಿಧಿಸಲಾಗಿದೆ.

1. ಶ್ರೀ ರಾಜಕುಮರ್ ಸಿಪಿಸಿ 1208 ಇವರನ್ನು ಸೇವೆಯಲ್ಲಿ ಪುನರ್ ನೇಮಕ ಮಾಡುವುದು.
2. ಇವರ ಮುಂದಿನ ಹದಿನೈದು (15) ವರ್ಷಗಳ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಸಹಿತವಾಗಿ ತಡೆ ಹಿಡಿಯುವುದು.
3. ಸದರಿ ಅವಧಿಯಲ್ಲಿ ಇವರು ಯಾವುದೇ ಮುಂಬಡ್ತಿ ಹೊಂದಲು ಅರ್ಹರಾಗಿರುವುದಿಲ್ಲದಿರುವುದು.
4. ಹದಿನೈದು ವರ್ಷಗಳ ದಂಡನಾ ಅವಧಿ ಮುಗಿದ ನಂತರ ಇವರ ವೇತನವನ್ನು ಇವರಿಗೆ ದಂಡನೆ ಜಾರಿ ಮಾಡಿದ ದಿನಾಂಕದಿಂದ ಹಿಂದಿನ ದಿನಾಂಕದಂದು ಯಾವ ಹುದ್ದೆಯಲ್ಲಿದ್ದರೊ ಆ ಹುದ್ದೆಯ ಶ್ರೇಣಿಯ ಕನಿಷ್ಟ ವೇತನ ನಿಗದಿ ಪಡಿಸುವುದು.
5. ಇವರು ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸುವುದು.

ಈ ಆದೇಶವು ಶಿಸ್ತು ಪ್ರಾಧಿಕಾರಿ ಆದೇಶಿಸಿದ ದಿನಾಂಕದಿಂದಲೇ ಜಾರಿಗೆ ಬರುತ್ತದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ಸಂಖ್ಯೆ:ಪಿಎಸ್‌ಸಿ/85/ಸಿಎಸ್‌ಎನ್ 2004 ದಿನಾಂಕ:18-10-2004 ಹಾಗೂ 10-03-2005ರ ಪತ್ರಗಳಲ್ಲಿನ ಅಭಿಪ್ರಾಯದ ಮೇರೆಗೆ ಹೊರಡಿಸಲಾಗಿದೆ.

**ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,**
**ಹೆಚ್.ಕೆ. ಗುಂಡೂರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 968

**ವಿಷಯ:** ಶ್ರೀ ಎಸ್.ಎಸ್.ಬದಾಮಿ, ಸಿಪಿಸಿ 986, ಬಾಗಲಕೋಟೆ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ-3/ಡಿಇ-16/2002 ಆಪು ನಂ.267/03 ದಿನಾಂಕ:09-07-2003.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರ ಆದೇಶ ಸಂಖ್ಯೆ:9/ಅಪೀಲು/103/ಉಪ 2003, ದಿನಾಂಕ:17-03-2004.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:16-06-2004.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/44 /2004, ದಿನಾಂಕ:12-10-2004.

**ಪ್ರಸ್ತಾವನೆ:**

ಶ್ರೀ ಎಸ್.ಎಸ್.ಬದಾಮಿ ಸಿಪಿಸಿ 986 ಬಾಗಲಕೋಟೆ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:** "ನೀವು ಸಿಪಿಸಿ 986 ಎಸ್.ಎಸ್.ಬದಾಮಿ, ಅಮೀನಗಡ ಪೊಲೀಸ್ ಠಾಣೆ ಈ ಮುಂಚೆ ನೀವು ಜಮಖಂಡಿ ಶಹರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಪಿಎಸ್‌ಐ ರವರು ದಿನಾಂಕ:10-11-02ರಂದು 1400 ಗಂಟೆಯಿಂದ 2000 ಗಂಟೆಯವರೆಗೆ ಬಸ್ ಸ್ಟ್ಯಾಂಡ್ ಕರ್ತವ್ಯಕ್ಕೆ ನೇಮಿಸಿದ್ದು, ಸದರಿ ಕರ್ತವ್ಯಕ್ಕೆ ಗೈರು ಹಾಜರಿ ಉಳಿದು ಜೂಜಾಟದಂತಹ ಸಮಾಜಬಾಹೀರ ಕೃತ್ಯ ಮಾಡುವ ಸಾರ್ವಜನಿಕರೊಂದಿಗೆ ಕೂಡಿಕೊಂಡು ಜಮಖಂಡಿಯ ಜೆಎಲ್‌ಬಿಸಿ ಐ.ಬಿ.ಯ ರೂಮ್ ನಂ.3ರಲ್ಲಿ ಇಸ್ಪೀಟು ಎಲೆಗಳ ಮೇಲೆ ಹಣವನ್ನು ಹಚ್ಚಿ

ಅಂದರ ಬಾಹರ ಎಂಬುವ ಜೂಜಾಟದಲ್ಲಿ ತೊಡಗಿ ಸಿಕ್ಕಿ ಬಿದ್ದಿದ್ದರಿಂದ ನಿಮ್ಮ ವಶದಲ್ಲಿದ್ದ ರೂ.19,400,00 ಗಳನ್ನು ಜಪ್ತಿ ಮಾಡಿದ್ದು ಅಲ್ಲದೇ ನಿಮ್ಮನ್ನು ಅಂದು 1945 ಗಂಟೆಗೆ ದಸ್ತಗಿರಿ ಮಾಡಿ ನ್ಯಾಯಾಂಗ ಬಂಧನಕ್ಕೆ ಕಳುಹಿಸಿ ಠಾಣಾ ಗುನ್ನಾ ನಂ.161:2002 ಕಲಂ 79, 80 ಕೆಪಿ ಆಕ್ಟ್ ಪ್ರಕಾರ ಪ್ರಕರಣ ದಾಖಲಿಸಿರುತ್ತಾರೆ. ನೀವು ಶಿಸ್ತಿನ ಇಲಾಖೆಯ ನೌಕರನಾಗಿ, ಶಿಸ್ತು ನಡುವಳಿಕೆಗಳ ವಿರುದ್ದ ವರ್ತಿಸಿ ಕ್ರಿಮಿನಲ್ ಪ್ರಕರಣದಲ್ಲಿ ಭಾಗಿಯಾಗಿ ನಿಮ್ಮ ಕರ್ತವ್ಯದಲ್ಲಿ ಘೋರ ದುರ್ನಡತೆ, ಅಶಿಸ್ತು ಹಾಗೂ ಕರ್ತವ್ಯ ವಿಮುಖತೆಯನ್ನು ಪ್ರದರ್ಶಿಸಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿಯ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:09-07-2003 ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲದಿದ್ದರೂ ಅರ್ಜಿದಾರರ ಸೇವೆಯನ್ನು ಪರಿಗಣಿಸಿ ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ:17-03-2004ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಲ್ಲಿ ಪುನರ್ ಸ್ಥಾಪಿಸಿ, ಅವರ ವೇತನವನ್ನು ಪೊಲೀಸ್ ಪೇದೆಯ ಕನಿಷ್ಟ ಮಟ್ಟಕ್ಕೆ ಇಳಿಸಿ, ಹೊಸದಾಗಿ ವೇತನ ಬಡ್ತಿ ಪಡೆಯುವಂತೆ ಶಿಕ್ಷೆ ವಿಧಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಯಾವುದೇ ಪ್ರಮುಖ ವಾದಾಂಶಗಳನ್ನು ಮಂಡಿಸಿರುವುದಿಲ್ಲ. ಆದರೆ, ಈ ಬಗ್ಗೆ ಇದ್ದ ಕ್ರಿಮಿನಲ್ ಮೊಕದ್ದಮೆ ಇತ್ಯರ್ಥ ಆಗಿದ್ದು, ಅರ್ಜಿದಾರರನ್ನು ಆರೋಪದಿಂದ ವಿಮುಕ್ತಗೊಳಿಸಿ, ಮೊಕದ್ದಮೆ ಇತ್ಯರ್ಥ ಆಗಿದ್ದು, ನ್ಯಾಯಾಲಯ ತೀರ್ಪು ನೀಡಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಬದಿಗೊತ್ತಿ ಮೇಲ್ಮನವಿ ಪ್ರಾಧಿಕಾರಿ ಅರ್ಜಿದಾರರನ್ನು ಸೇವೆಯಲ್ಲಿ ಪುನರ್‌ಸ್ಥಾಪಿಸಿ, ಸೇವೆಯಲ್ಲಿ ಸರಿಯಾಗಿ ಕರ್ತವ್ಯ ನಿರ್ವಹಿಸಲು ಒಂದು ಅವಕಾಶ ನೀಡಿ, ಅವರ ವೇತನವನ್ನು ಪೊಲೀಸ್ ಪೇದೆಯ ಕನಿಷ್ಟ ಮಟ್ಟಕ್ಕೆ ಇಳಿಸಿ, ನಂತರ ಹೊಸದಾಗಿ ವೇತನ ಬಡ್ತಿಗಳನ್ನು ಪಡೆಯುವಂತೆ ಆದೇಶಿಸಿದ್ದು, ಈ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 131 ಪೊಸಿಅ 2004, ಬೆಂಗಳೂರು, ದಿನಾಂಕ: 21ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಾವಳಿ,1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಎಸ್. ಬದಾಮಿ ಸಿಪಿಸಿ 986 ಬಾಗಲಕೋಟೆ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ಗುಂಡೂರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 969

**ವಿಷಯ:** ಶ್ರೀ ಜೆ.ಸಿ.ಲೀಲಾರಾಜ್, ಪಿಎಸ್‌ಐ., ಚಿಕ್ಕಮಗಳೂರು ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ,ಇವರ ಆದೇಶ ಸಂಖ್ಯೆ:ಡಿಇ/4/2002 ಓಬಿ ಸಂಖ್ಯೆ:79/2004 ದಿನಾಂಕ:15-04-2004.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಪಶ್ಚಿಮ ವಲಯ, ಮಂಗಳೂರು ಇವರ ಆದೇಶ ಸಂಖ್ಯೆ:ಸಿಬ್ಬಂದಿ/ಮೇಲ್ಮನವಿ/ 1/2004-05. ದಿನಾಂಕ:24-09-2004.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:13-12-2004.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/5/2005 ದಿನಾಂಕ:22-03-2005.

**ಪ್ರಸ್ತಾವನೆ:**

ಶ್ರೀ ಜೆ.ಸಿ.ಲೀಲಾರಾಜ್, ಪಿಎಸ್‌ಐ ಬಣಕಲ್ ಪೊಲೀಸ್ ಠಾಣೆ ಚಿಕ್ಕಮಗಳೂರು ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:** "1. ಚಿಕ್ಕಮಗಳೂರು ಜಿಲ್ಲೆಯ ಕುದುರೆಮುಖ ಪೊಲೀಸ್ ಠಾಣೆಯಲ್ಲಿ ನೀವು ಪಿಎಸ್‌ಐ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿನಾಂಕ:25-12-01ರಂದು ಶ್ರೀಮತಿ ಲಕ್ಷ್ಮಮ್ಮ ಕೋಂ ಲೇಟ್ ಚೆನ್ನ, ಸಂಸೆ ಗ್ರಾಮ, ಇವರು ಕುದುರೆಮುಖ ಠಾಣೆಗೆ ಹಾಜರಾಗಿ ಆಕೆಯ ಮಗನಾದ ಕೃಷ್ಣಪ್ಪನಿಗೆ ಆರೋಪಿಗಳಾದ ಜಯರಾಮ ಮತ್ತಿತರರು ದಿನಾಂಕ:23-12-01ರಂದು ಹೊಸೂರು ನಾರಾಯಣಗೌಡರ ಅಂಗಡಿ ಮುಂಭಾಗ

ಸಾರ್ವಜನಿಕ ರಸ್ತೆಯಲ್ಲಿ ಹಲ್ಲೆ ನಡೆಸಿ, ಜಾತಿ ನಿಂದನೆ ಮಾಡಿದ್ದರಿಂದ, ಅವಮಾನ ತಾಳಲಾರದೆ ಆತ್ಮಹತ್ಯೆ ಮಾಡಿಕೊಂಡಿರುತ್ತಾನೆಂದು ದೂರು ನೀಡಿದರೂ ಸಹ, ಕುದುರೆಮುಖ ಠಾಣೆಯ ಪಿಎಸ್ಐ ಆಗಿದ್ದ ನೀವು ಆರೋಪಿಗಳ ವಿರುದ್ಧ ಘೋರ ಪ್ರಕರಣ ಕಲಂ 306 ಐಪಿಸಿ ಮತ್ತು ಕಲಂ 3 Clause (10) SC/ST/PA Act 1989 ರಂತೆ ಪ್ರಕರಣ ದಾಖಲಿಸದೆ, ಆರೋಪಿಗಳಿಗೆ ಸಹಾಯ ಮಾಡುವ ಉದ್ದೇಶದಿಂದ ನೀವು ನಿಮ್ಮ ಠಾಣೆ UDR No.8/01 ಕಲಂ 174 CrPC ರೀತ್ಯಾ ಪ್ರಕರಣ ದಾಖಲಿಸಿ, ನಿಮ್ಮ ಆದ್ಯ ಕರ್ತವ್ಯದಲ್ಲಿ ನಿರ್ಲಕ್ಷ್ಯತನ, ತೋರಿಸಿ, ಕರ್ತವ್ಯ ಲೋಪ ಎಸಗಿದ್ದಾಗಿರುತ್ತದೆ."

2. "ಈ ಪ್ರಕರಣವನ್ನು ಪೊಲೀಸ್ ಉಪಾಧೀಕ್ಷಕರು, ಕೊಪ್ಪ ಉಪ ವಿಭಾಗ ರವರು ಸ್ವತ: ಪರಿಶೀಲಿಸಿ, ಫಿರ್ಯಾದಿಯ ಹಾಗೂ ಸಾಕ್ಷಾದಾರರ ಹೇಳಿಕೆಗಳನ್ನು ಪಡೆದುಕೊಂಡು SC/ST ದೌರ್ಜನ್ಯ ತಡೆ ಕಾಯಿದೆ ಅಡಿಯಲ್ಲಿ ಪ್ರಕರಣವನ್ನು ದಾಖಲಿಸುವರೆಗೂ, ಆಪಾದಿತ ಪಿಎಸ್ಐ ಆದ ನೀವು ಯಾವುದೇ ಕ್ರಮ ಕೈಗೊಂಡಿರುವುದಿಲ್ಲ. ಶಿಸ್ತಿನ ಪೊಲೀಸ್ ಇಲಾಖೆಯಲ್ಲಿ ಜವಾಬ್ದಾರಿಯುತ ಅಧಿಕಾರಿಯಾಗಿ ಸೇವೆ ಸಲ್ಲಿಸುತ್ತಿರುವ ನೀವು ಫಿರ್ಯಾದಿ ಲಕ್ಷ್ಮಮ್ಮ ಹಾಗೂ ಇತರೆ ಸಾಕ್ಷಿದಾರರಿಂದ ಮೃತನ ಸಾವಿನ ವಿಚಾರ ತಿಳಿದಿದ್ದರೂ ಕೂಡ ಆರೋಪಿಗಳಿಗೆ ಸಹಾಯ ಮಾಡುವ ಉದ್ದೇಶದಿಂದ ಘೋರ ಪ್ರಕರಣ ದಾಖಲಿಸದೆ ಗಂಭೀರ ಸ್ವರೂಪದ ಕರ್ತವ್ಯ ಲೋಪ ಎಸಗಿರುವುದರಿಂದ ಈ ದೋಷಾರೋಪಣಾ ಪತ್ರ ನೀಡಲಾಗಿದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿಯ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:15-04-2004ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಅವರು ಪಡೆಯುತ್ತಿರುವ ವೇತನ ಶ್ರೇಣಿಯಲ್ಲಿ ಒಂದು ವರ್ಷಗಳ ಕಾಲ ಕನಿಷ್ಟ ಮಟ್ಟಕ್ಕೆ ಇಳಿಸಿ, ಮುಂಬರುವ ವೇತನ ಬಡ್ತಿಗಳನ್ನು ಹೊಸದಾಗಿ ಪಡೆಯುವಂತೆ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಪಶ್ಚಿಮ ವಲಯ, ಮಂಗಳೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ:24-09-2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 256 ಪೊಸಿಅ 2004, ಬೆಂಗಳೂರು, ದಿನಾಂಕ: 21ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಾವಳಿ,1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜೆ.ಸಿ.ಲೀಲಾರಾಜ್ ಪಿಎಸ್ಐ, ಬಣಕಲ್ ಪೊಲೀಸ್ ಠಾಣೆ, ಚಿಕ್ಕಮಗಳೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಪಿ.ಆರ್. 970

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎನ್.ಡಿ.ಬಸವರಾಜು, ಸಿಪಿಸಿ 1485, ಬೆಂಗಳೂರು ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿದ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಂಗಳೂರು ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ/4/ಡಿಇ/45/1998-99. ಓಬಿ ಸಂಖ್ಯೆ:67/01-02, ದಿನಾಂಕ:12-06-2001
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರವಲಯ, ಬೆಂಗಳೂರು ಇವರ ಆದೇಶ ಸಂಖ್ಯೆ:ಅಪೀಲು/12/02-03, ಓಬಿ ಸಂಖ್ಯೆ:72/02-03 ದಿನಾಂಕ:21-06-2002.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:25-04-2003.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/15/2003-04, ದಿನಾಂಕ:11-11-2003.

**ಪ್ರಸ್ತಾವನೆ:**

ಶ್ರೀ ಎನ್.ಡಿ.ಬಸವರಾಜು ಸಿಪಿಸಿ 1485, ಬೆಂಗಳೂರು ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:** "ಎಸ್.ಡಿ.ಬಸವರಾಜು, ಸಿಪಿಸಿ 1485 ಹೆಬ್ಬಗೋಡಿ ಪೊಲೀಸ್ ಠಾಣೆ ಮತ್ತು ಎಪಿಸಿ 198 ಶ್ರೀ ಪುಟ್ಟಸ್ವಾಮಿ, ಡಿ.ಎ.ಆರ್.ಚೆನ್ನಪಟ್ಟಣ ಆದ ನಿಮ್ಮನ್ನು ದಿನಾಂಕ:23-12-1998ರ ರಾತ್ರಿ ಗಸ್ತು ಕರ್ತವ್ಯಕ್ಕೆ ಹೊಸ ರಸ್ತೆ ಚನ್ನಕೇಶವನಗರ ನಾಗನಾಥಪುರ, ನರಸಾಪುರ ರಸ್ತೆಗಳಲ್ಲಿಗೆ ನೇಮಕ ಮಾಡಿದ್ದು, ಹೊಸ ರಸ್ತೆಯ ಬಳಿ ಕುಟ್ಟುಕಾರನ್ ಆಟೋಮೊಬೈಲ್ ಮತ್ತು ಪಾಪ್ಯುಲರ್ ಆಟೋಮೊಬೈಲ್‌ಗಳ ಗೋಡಾನ್‌ಗಳ ಬೀಗಗಳನ್ನು 5-6 ಜನ ಕಳ್ಳರು ಕಳ್ಳತನ ಮಾಡಲು ಹೊಡೆಯುತ್ತಿದ್ದಾಗ ಮುಂಜಾಗರೂಕತೆಯಿಂದ ಸನ್ನಿವೇಶದ ಸೂಕ್ಷ್ಮತೆಯನ್ನು ಅರಿತು ಗಾಳಿಯಲ್ಲಿ ಗುಂಡು ಹಾರಿಸದೇ, ತಪ್ಪಿದರೆ ಕಳ್ಳರ ಮೇಲೆ ಗುಂಡು ಹಾರಿಸದೆ ನಿರ್ಲಕ್ಷಿಸಿ ಬೇಜವಾಬ್ದಾರಿಯಿಂದ ವರ್ತಿಸಿದ ಪರಿಣಾಮವಾಗಿ ಕಳ್ಳರೇ ನಿಮ್ಮ ಬಳಿಯಿದ್ದ 306 ರೈಫಲ್ ಮತ್ತು 5 ಜೀವಂತ ಗುಂಡುಗಳನ್ನು ಕಸಿದುಕೊಂಡು ಪರಾರಿಯಾಗಿರುತ್ತಾರೆ. ಈ ಘಟನೆ ನಡೆಯಲು ನಿಮ್ಮ ಕರ್ತವ್ಯ ಆಶ್ರದ್ದೆ, ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ತೋರಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:12-06-2001ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯ 2 ಹಂತಗಳನ್ನು ಸಂಚಿತ ಪರಿಣಾಮವಾಗಿ ಮುಂದೂಡಿ, ಬಂದೂಕಿನ ಬೆಲೆಯನ್ನು ಅವರ ವೇತನದಲ್ಲಿ ಕಡಿತಗೊಳಿಸುವ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು ಇವರು ಮೇಲ್ಮನವಿಯನ್ನು ವಿಳಂಬವಾಗಿ ಸಲ್ಲಿಸಿರುವ ಕಾರಣ ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:21-06-2002 ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಗಸ್ತಿನ ಮೇಲೆ ಹೋಗಬೇಕಾದ ವಹಿಸಬೇಕಾಗಿದ್ದ ಕರ್ತವ್ಯವನ್ನು ನಿರ್ವಹಿಸದೆ, ಬಂದೂಕು ಕಳುವಾಗಲು ಕಾರಣರಾಗಿರುತ್ತಾರೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 75 ಪೊಸಿಅ 2003, ಬೆಂಗಳೂರು, ದಿನಾಂಕ: 21ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿ) ನಿಯಮಾವಳಿ, 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಡಿ. ಬಸವರಾಜು ಸಿಪಿಸಿ 1485 ಬೆಂಗಳೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

ಪಿ.ಆರ್. 971

## ಅಧಿಕೃತ ಜ್ಞಾಪನ

### ಸಂಖ್ಯೆ: ಒಇ 133 ಪೊಸಿಇ 2002, ಬೆಂಗಳೂರು, ದಿನಾಂಕ: 28ನೇ ಜೂನ್, 2005

**ವಿಷಯ:** ಸಹಾಯಕ ಕಮಾಂಡೆಂಟ್, ಕೆ.ಎಸ್.ಆರ್.ಪಿ.ರವರುಗಳ ಜೇಷ್ಠತಾ ಪಟ್ಟಿ ದಿನಾಂಕ 1-1-2005 ರಲ್ಲಿದ್ದಂತೆ ಪ್ರಕಟಿಸುವ ಬಗ್ಗೆ.

**ಉಲ್ಲೇಖ:**
1. ಒಇ 388 ಪಿಇಜಿ 88 ದಿನಾಂಕ:25-09-97.
2. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ:ಒಇ 266 ಪೊಸಿಪ 98 ದಿನಾಂಕ:10-03-2003.
3. ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು ರವರ ಪತ್ರ ಸಂಖ್ಯೆ:ಸಿಬಿ4/54/1990-91 ದಿನಾಂಕ 02-08-2004.

ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 104 ಪಿಇಜಿ 83 ದಿನಾಂಕ:5-8-83ರಲ್ಲಿ ಕೆ.ಎಸ್.ಆರ್.ಪಿ. ಸಹಾಯಕ ಕಮಾಂಡೆಂಟ್‌ರವರುಗಳ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗಿತ್ತು. ಈ ಜೇಷ್ಠತಾ ಪಟ್ಟಿಯು ಪೂರ್ಣ ಅವಧಿ ಮುಗಿದ ನಂತರ, ಕಮಾಂಡೆಂಟ್ ಹುದ್ದೆಗೆ ಪದೋನ್ನತಿ ನೀಡುವಾಗ ಸಹಾಯಕ ಕಮಾಂಡೆಂಟ್ ಹುದ್ದೆಯಲ್ಲಿ ಅವಿಚ್ಛಿನವಾಗಿ ಸ್ಥಾನಪನ್ನರಾಗಿ ಕಾರ್ಯ ನಿರ್ವಹಿಸಿದಂತಹ ಆಧಾರದ ಮೇಲೆ ಪದೋನ್ನತಿ ನೀಡಲಾಗಿರುತ್ತದೆ. ಅಧಿಕೃತ ಜ್ಞಾಪನ ಸಂಖ್ಯೆ:ಸಿಆಸುಇ 43 ಸೇಸಿನಿ 87 ದಿನಾಂಕ 14-12-87ರಲ್ಲಿ ಸರ್ವೋಚ್ಛ ನ್ಯಾಯಾಲಯವು ಗೋನಾಲ್ ಭೀಮಪ್ಪ ಇವರ ಪ್ರಕರಣದಲ್ಲಿ ನೀಡಿದ ತೀರ್ಪಿನ ಹಿನ್ನೆಲೆಯಲ್ಲಿ ನೇರ ನೇಮಕಾತಿ ಹೊಂದಿದ ಮತ್ತು ಸೇವಾ ಮುಂಬಡ್ತಿ ಹೊಂದಿದ ಸರ್ಕಾರಿ ನೌಕರರುಗಳ ನಡುವೆ ಜೇಷ್ಠತೆಯನ್ನು ನಿರ್ಧರಿಸುವ ಬಗ್ಗೆ ಮಾರ್ಗಸೂಚಿಗಳನ್ನು ರೂಪಿಸಲಾಗಿದ್ದು ಅದರಂತೆ ಸಹಾಯಕ ಕಮಾಂಡೆಂಟ್‌ರವರುಗಳ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲು ಪರಿಶೀಲಿಸಲಾಯಿತು. ಅದರಂತೆ ದಿನಾಂಕ: 01-11-1956 ರಿಂದ ಹಿಡಿದು 16-09-93ರವರೆಗೆ ಲಭ್ಯವಿರುವ ರಿಕ್ತ ಸ್ಥಾನಗಳನ್ನು ಆಧರಿಸಿ ಸಹಾಯಕ ಕಮಾಂಡೆಂಟ್ ರವರುಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ತಯಾರಿಸಿ ಮೇಲಿನ ಉಲ್ಲೇಖ-1ರಲ್ಲಿ ಪ್ರಕಟಿಸಲಾಯಿತು. ಪ್ರತಿ ಬ್ಲಾಕ್‌ನಲ್ಲೂ ರಿಕ್ತ ಸ್ಥಾನಗಳ ಹಂಚಿಕೆ ಹಾಗೂ ವರ್ಗೀಕರಣವನ್ನು ಅನುಬಂಧ-1ರಲ್ಲಿ ನೀಡಿ ಸಹಾಯಕ ಕಮಾಂಡೆಂಟ್ ರವರುಗಳು ಅವರ ವೃಂದದಲ್ಲಿ ಸಾಕ್ಷೇಪ ದರ್ಜಾ ಅರ್ಹತೆಯನ್ನು ಹೊಂದಿರುವುದನ್ನು (relative ranking)ಅನುಬಂಧ-2ರಲ್ಲಿ ನೀಡಿ, ಮುಂಬಡ್ತಿಗಾಗಿ ನಿಗದಿಪಡಿಸಿರುವ ರಿಕ್ತ ಸ್ಥಾನಗಳ ಕೋಟಾಕ್ಕಿಂತ ಹೆಚ್ಚುವರಿಯಾಗಿ ಸಹಾಯಕ ಕಮಾಂಡೆಂಟ್ ರವರುಗಳ ಹುದ್ದೆಯನ್ನು ಸ್ವತಂತ್ರ ಪ್ರಭಾರದಲ್ಲಿ ಕೆಲಸ ನಿರ್ವಹಿಸುತ್ತಿರುವ ಮುಂಬಡ್ತಿ ಹೊಂದಿದ (promotees) ಅಧಿಕಾರಿಗಳ ಪಟ್ಟಿಯನ್ನು ಅನುಬಂಧ-1ರಲ್ಲಿ ನೀಡಲಾಯಿತು.

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ:** ಕರ್ನಾಟಕ ನೀರಾವರಿ ನಿಗಮ ನಿಯಮಿತವು (ಕೆಎನ್ಎನ್ಎಲ್) 2005–06ನೇ ಸಾಲಿನಲ್ಲಿ ಕ್ರೋಢೀಕರಿಸುವ ರೂ.250.00 ಕೋಟಿಗಳಿಗೆ ಸರ್ಕಾರದ ಖಾತರಿ ನೀಡುವ ಬಗ್ಗೆ.

**ಓದಲಾಗಿದೆ:** ಕರ್ನಾಟಕ ನೀರಾವರಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ:ಕನೀನಿ/ಆರ್ಥಿಕ/195/2005–06/637, ದಿನಾಂಕ: 30/05/2005.

**ಪ್ರಸ್ತಾವನೆ:**

ಸರ್ಕಾರದ ದಿನಾಂಕ: 26/11/1998ರ ಆದೇಶ ಸಂಖ್ಯೆ: ನೀಇ 201 ಕೆಬಿಎನ್ 98ರಲ್ಲಿ ಕಂಪನಿ ಕಾಯ್ದೆ 1956ರ ಅಡಿಯಲ್ಲಿ ಕೆಲವು ನಿರ್ದಿಷ್ಟ ನೀರಾವರಿ ಯೋಜನೆಗಳನ್ನು ಅನುಷ್ಠಾನಗೊಳಿಸುವ ಸಲುವಾಗಿ ಕರ್ನಾಟಕ ನೀರಾವರಿ ನಿಗಮ ನಿಯಮಿತವನ್ನು (ಕೆಎನ್ಎನ್ಎಲ್) ಸರ್ಕಾರಿ ಸ್ವಾಮ್ಯದ ಉದ್ಯಮವನ್ನಾಗಿ ಸ್ಥಾಪಿಸಲು ಅನುಮೋದನೆಯನ್ನು ನೀಡಲಾಗಿದೆ. ಇದರಂತೆ, ಕರ್ನಾಟಕ ನೀರಾವರಿ ನಿಗಮ ನಿಯಮಿತಕ್ಕೆ ಘಟಪ್ರಭಾ, ಮಲಪ್ರಭಾ, ಮಾರ್ಕಂಡೇಯ, ಹರಿನಾಲಾ, ತುಂಗಾ ಮೇಲ್ದಂಡೆ ಯೋಜನೆ, ಸಿಂಗಟಾಲೂರು, ಭೀಮಾಲಿಫ್ಟ್, ಹಿಪ್ಪರಗಿ, ಗಂಡೋರಿ ನಾಲಾ, ತುಂಗಾ ಏತ ನೀರಾವರಿ, ಕಳಸ, ಬಂಡೂರ ನಾಲಾ ಹಾಗೂ ದೂದಗಂಗಾ ಯೋಜನೆಗಳಲ್ಲದೆ ಸಣ್ಣ ನೀರಾವರಿ ಕೆರೆಗಳಲ್ಲಿ ಹೂಳು ತೆಗೆಯುವ ಕಾರ್ಯಕ್ರಮದ ಅಡಿಯಲ್ಲಿ ಕಾಮಗಾರಿಗಳಿಗೆ ಸಂಪನ್ಮೂಲವನ್ನು ಒದಗಿಸುವ ಜವಾಬ್ದಾರಿಯನ್ನು ವಹಿಸಲಾಗಿದೆ.

ಕರ್ನಾಟಕ ನೀರಾವರಿ ನಿಗಮ ನಿಯಮಿತವನ್ನು ಸ್ಥಾಪಿಸಿರುವ ಮುಖ್ಯ ಉದ್ದೇಶವೇನೆಂದರೆ, ಈ ಮೇಲ್ಕಂಡ ಯೋಜನೆಗಳನ್ನು ಹಾಗೂ ಇನ್ನು ಮುಂದೆ ಸದರಿ ನಿಗಮಕ್ಕೆ ವಹಿಸುವ ಯೋಜನೆಗಳನ್ನು ಪೂರ್ಣಗೊಳಿಸಲು ಬೇಕಾಗುವ ಸಂಪನ್ಮೂಲವನ್ನು ಬಾಂಡ್/ಡಿಬೆಂಚರ್‌ಗಳ ಬಿಡುಗಡೆ ಮೂಲಕ, ಠೇವಣಿಗಳು ಹಾಗೂ ಅವಧಿ ಸಾಲದ ಮೂಲಕ ಕ್ರೋಢೀಕರಿಸಲು ಉದ್ದೇಶಿಸಲಾಗಿದೆ. ಇದಕ್ಕೆ ನಿಗಮದ ಮೆಮೋರಾಂಡಮ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್ ಕಂಡಿಕೆ ಬಿ8 ಮತ್ತು ಆರ್ಟಿಕಲ್ 84 ರಿಂದ 89ರಲ್ಲಿ ಅವಕಾಶ ಕಲ್ಪಿಸಲಾಗಿದೆ. ಇದರಂತೆ ಕೆಎನ್ಎನ್ಎಲ್ 2004 ಜುಲೈ ವರೆಗೆ ಬಾಂಡ್‌ಗಳ ಬಿಡುಗಡೆ ಮೂಲಕ ರೂ.1665.05 ಕೋಟಿಗಳನ್ನು ಕ್ರೋಢೀಕರಿಸಿದ್ದು, ಪೂರ್ಣ ಮೊತ್ತವನ್ನು 31/3/2005 ಅಂತ್ಯಕ್ಕೆ ವೆಚ್ಚ ಮಾಡಲಾಗಿದೆ.

ಮೇಲೆ ಓದಲಾದ ಕರ್ನಾಟಕ ನೀರಾವರಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರದಲ್ಲಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, 2005–06ನೇ ಸಾಲಿನಲ್ಲಿ ರೂ. 250.00 ಕೋಟಿಗಳ ಬಾಂಡ್ ಸಂಗ್ರಹಣೆಯನ್ನು ಗಣನೆಗೆ ತೆಗೆದುಕೊಂಡು ವಾರ್ಷಿಕ ಯೋಜನಾ ಕಾರ್ಯಕ್ರಮವನ್ನು ಅನುಮೋದಿಸಿರುತ್ತದೆ ಎಂದು ತಿಳಿಸುತ್ತಾ, ಈ ಕೆಳಗೆ ನಮೂದಿಸಿರುವ ಅಂಶಗಳಿಗೆ ಅನುಮೋದನೆ ಕೋರಿದ್ದಾರೆ.

i) ಅ) 2005–06ನೇ ಸಾಲಿನಲ್ಲಿ ಕರ್ನಾಟಕ ನೀರಾವರಿ ನಿಗಮವು, ಸಾರ್ವಜನಿಕ ನೀಡಿಕೆ ಅಥವಾ ಖಾಸಗಿ ಹಂಚಿಕೆಗಳ ಮೂಲಕ ವಿವಿಧ ಷೇರುಗಳಲ್ಲಿ ಬಾಂಡ್‌ಗಳನ್ನು ಬಿಡುಗಡೆ ಮಾಡಿ ಸಾಲ ಎತ್ತುವ ಕಾರ್ಯಕ್ರಮಕ್ಕೆ ಅನುಮೋದನೆ ನೀಡುವುದು.

ಆ) ಹಣಕಾಸು ಸಂಸ್ಥೆಗಳಿಂದ ಅಥವಾ ಬ್ಯಾಂಕುಗಳಿಂದ ಅವಧಿ ಸಾಲಗಳ ಮೂಲಕ ಹಣವನ್ನು ಕ್ರೋಢೀಕರಿಸಲು ಅನುಮೋದನೆ ನೀಡುವುದು.

ii) 2005–06ನೇ ಸಾಲಿನಲ್ಲಿ ಪಡೆಯಬಹುದಾದ ಸಾಲದ ಮೊತ್ತ ರೂ.250.00 ಕೋಟಿಗಳ ಮರುಪಾವತಿಗೆ ಮತ್ತು ಈ ಮೊತ್ತಕ್ಕೆ ನೀಡಬೇಕಾದ ಬಡ್ಡಿ ಪಾವತಿಗಾಗಿ ಸರ್ಕಾರದ ಬೇಷರತ್ ಮತ್ತು ಹಿಂತೆಗೆದುಕೊಳ್ಳಲಾಗದ ಖಾತರಿಯನ್ನು ನೀಡುವುದು.

iii) ಸಾಲದ ಮರುಪಾವತಿ ಮತ್ತು ಬಡ್ಡಿ ಸಂದಾಯಕ್ಕಾಗಿ ಕರ್ನಾಟಕ ಸರ್ಕಾರದಿಂದ ಬಜೆಟ್ ಬೆಂಬಲದ ಆಶ್ವಾಸನೆಯೊಂದಿಗೆ ಕರ್ನಾಟಕ ನೀರಾವರಿ ನಿಗಮ, ಬಾಂಡುಗಳ ನಿಕ್ಷೇಪದಾರಿಗಳು ಮತ್ತು ಕರ್ನಾಟಕ ಸರ್ಕಾರ ಇವರುಗಳ ನಡುವೆ ತ್ರಿಮುಖೀಯ ಒಪ್ಪಂದ ಮಾಡಿಕೊಳ್ಳುವುದಕ್ಕೆ ಅನುಮೋದನೆ ನೀಡುವುದು.

iv) 2005–06ನೇ ಸಾಲಿನಲ್ಲಿ ಪಡೆಯಬಹುದಾದ ಸಾಲದ ಮೊತ್ತ ರೂ.250.00 ಕೋಟಿಗಳಿಗೆ ಒದಗಿಸುವ ಖಾತರಿಯ ಮೇಲಿನ ಗ್ಯಾರಂಟಿ ಕಮೀಷನನ್ನು ಮನ್ನಾ ಮಾಡುವುದು.

1999–2000ನೇ ಸಾಲಿನಿಂದ 2004–05ನೇ ಸಾಲಿನ ರವರೆಗೆ ಕರ್ನಾಟಕ ನೀರಾವರಿ ನಿಗಮವು ಕ್ರೋಢೀಕರಿಸಿರುವ ಮೊತ್ತ, ಕೂಪನ್ ದರಗಳು ಹಾಗೂ ಮರು ಪಾವತಿಸಿರುವ ಮೊತ್ತ ಮತ್ತು ಅಂತಿಮವಾಗಿ ಕ್ರೋಢೀಕರಿಸಿರುವ ಮೊತ್ತದ ವಿವರಗಳನ್ನು ಈ ಕೆಳಗಿನ ಪಟ್ಟಿಯಲ್ಲಿ ತೋರಿಸಲಾಗಿದೆ.

**Details of amount mobilised by KNNL from 1999-2000 to 2004-05**

**(Rs. In Crores)**

| Year | Series | Coupon Rate | Payment | Amount Borrowed | Amount Repaid | Net Borrowings |
|---|---|---|---|---|---|---|
| 1999-2000 | Series - I Regular | 13.25% | Semi - Annually | 119.76 | 119.76 | - |
| | Series – I Reset | 13.00% | Semi – Annually | 141.13 | 141.13 | - |
| | **Total of Series – I** | | | **260.89** | | - |
| | Series – II Regular | 12.75% | Annually | 209.88 | 209.88 | 00.00 |
| | Series – II Reset | 12.40% | Annually | 4.55 | 4.55 | 00.00 |
| | **Total for Series – II** | | | **214.43** | **214.43** | **0.00** |
| | **Year Total** | | | **475.32** | **475.32** | **0.00** |

| Year | Series | Coupon Rate | Payment | Amount Borrowed | Amount Repaid | Net Borrowings |
|---|---|---|---|---|---|---|
| 2000-2001 | Series – III Regular | 13.00% | Annually | 185.65 | - | 185.65 |
| 2001-2002 | Series – IV Regular | 11.75% | Annually | 186.18 | - | 186.18 |
| | Series – IVA Regular | 11.40% | Annually | 88.80 | - | 88.80 |
| | **Year Total** | | | **274.98** | **-** | **274.98** |
| 2002-2003 | Series – V Regular | 10.66% | Annually | 174.20 | - | 174.20 |
| | Series – VA Regular | 9.70% | Annually | 46.90 | - | 46.90 |
| | **Year Total** | | | **221.10** | **-** | **221.10** |
| 2003-2004 | Series – VI Regular | 6.70% | Annually | 200.00 | - | 200.00 |
| | **Year Total** | | | **200.00** | **-** | **200.00** |
| 2004-2005 | Series-VII Regular | 3.95% | Annually | 88.00 | - | 88.00 |
| | Term Loan | 7.00% | Annually | 100.00 | - | 100.00 |
| | Term loan | 7.00% | Quarterly | 120.00 | 60.00 | 60.00 |
| | **Total** | | | **308.00** | **60.00** | **248.00** |
| | | | **Grand Total** | **1,655.05** | **535.32** | **1,129.73** |

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 3 ಕನೀನಿ 2005 ಬೆಂಗಳೂರು, ದಿನಾಂಕ: 1ನೇ ಜುಲೈ, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಕರ್ನಾಟಕ ನೀರಾವರಿ ನಿಗಮ ನಿಯಮಿತಕ್ಕೆ 2005–06ನೇ ಸಾಲಿನಲ್ಲಿ ರೂ.250.00 ಕೋಟಿಗಳನ್ನು ಕ್ರೋಢೀಕರಿಸಲು ಈ ಕೆಳಗಿನ ಅಂಶಗಳೊಳಗೊಂಡ ಸರ್ಕಾರಿ ಆದೇಶ ಹೊರಡಿಸಿದೆ.

ಎ) ಕರ್ನಾಟಕ ನೀರಾವರಿ ನಿಗಮ ನಿಯಮಿತ ರೂ.250.00 ಕೋಟಿಗಳ ಸಂಪನ್ಮೂಲವನ್ನು ಮಾರುಕಟ್ಟೆ/ ಆರ್ಥಿಕ ಸಂಸ್ಥೆಗಳಿಂದ ಸಾಲದ ಮೂಲಕ ಕ್ರೋಢೀಕರಿಸಲು ಸರ್ಕಾರಿ ಖಾತರಿಯನ್ನು ನೀಡಿದೆ.

ಬಿ) ಈ ಸಾಲದ ಷರತ್ತುಗಳನ್ನು ಅಂತಿಮಗೊಳಿಸುವ ಮೊದಲು ಆರ್ಥಿಕ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿರುವ ನಿಗಮದ ನಿರ್ದೇಶಕರ ಮಂಡಳಿಯ ಆರ್ಥಿಕ ಸಮಿತಿಯಿಂದ ಬಡ್ಡಿ ದರ, ಅವಧಿ ಇತ್ಯಾದಿ ವಿವರಗಳಿಗೆ ಅನುಮೋದನೆ ಪಡೆಯಬೇಕಾಗಿದೆ.

ಸಿ) ಈ ಸಾಲದ ಹಣವನ್ನು ನಾಲ್ಕು ತ್ರೈಮಾಸಿಕ ಕಂತುಗಳಲ್ಲಿ ಪಡೆದುಕೊಳ್ಳುವುದು.

ಡಿ) ಕರ್ನಾಟಕ ನೀರಾವರಿ ನಿಗಮ ಶೇಕಡ 1ರಷ್ಟು ಗ್ಯಾರಂಟಿ ಕಮಿಷನನ್ನು ಸರ್ಕಾರಕ್ಕೆ ಸಂದಾಯ ಮಾಡುವುದು.

ಇ) 2005–06ನೇ ಸಾಲಿನಲ್ಲಿ ಪಡೆಯಬಹುದಾದ ಸಾಲದ ಮೊತ್ತ ರೂ.250.00 ಕೋಟಿಗಳ ಮರುಪಾವತಿಗೆ ಮತ್ತು ಈ ಮೊತ್ತಕ್ಕೆ ನೀಡಬೇಕಾದ ಬಡ್ಡಿ ಹಣದ ಪಾವತಿಗಾಗಿ ಸರ್ಕಾರದ ಬೇಷರತ್ ಮತ್ತು ಹಿಂತೆಗೆದುಕೊಳ್ಳಲಾಗದ ಖಾತರಿ ನೀಡಿದೆ.

ಎಫ್) ಈ ಸಾಲದ ಮರುಪಾವತಿಗೆ ಮತ್ತು ಈ ಮೊತ್ತಕ್ಕೆ ನೀಡಬೇಕಾದ ಬಡ್ಡಿ ಹಣದ ಪಾವತಿಗಾಗಿ ಕರ್ನಾಟಕ ಸರ್ಕಾರದ ಬಜೆಟ್ ಬೆಂಬಲದ ಆಶ್ವಾಸನೆಗಾಗಿ, ಕರ್ನಾಟಕ ನೀರಾವರಿ ನಿಗಮ ನಿಯಮಿತ, ಬಾಂಡುಗಳ ನಿಕ್ಷೇಪದಾರರು/ಸಾಲದ ಹೂಡಿಕೆದಾರರ ಮತ್ತು ಕರ್ನಾಟಕ ಸರ್ಕಾರ ಇವರುಗಳ ನಡುವೆ ತ್ರಿಮುಖಿ ಒಪ್ಪಂದ ಮಾಡಿಕೊಳ್ಳುವುದಕ್ಕೆ ಅನುಮೋದನೆ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಬ್ಲ್ಯೂಡಿ 504 ಎಫ್‌ಸಿ–1 2005, ದಿನಾಂಕ: 22/06/2005ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಐ.ಡಿ. ಧಮನ್
ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ),
ಜಲ ಸಂಪನ್ಮೂಲ ಇಲಾಖೆ (ಕೃಭಾಜನಿನಿ ವಿ.ಕೋಶ).

ಪಿ.ಆರ್.977

**ವಿಷಯ:** ಗುಲ್ಬರ್ಗಾ ಜಿಲ್ಲೆಯ ಮುಲ್ಲಾಮಾರಿ ಮೇಲ್ದಂಡೆ ಯೋಜನೆಯಡಿಯಲ್ಲಿ ಮುಳುಗಡೆಯಾಗಿರುವ ಭೂಸ್ವಾಧೀನ ಪ್ರಕರಣಗಳಿಗಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ನೀರಾವರಿ ಯೋಜನೆಗಳ ವಲಯ, ಗುಲ್ಬರ್ಗಾರವರ ಪತ್ರ ಸಂಖ್ಯೆ: ನೀಯೋವ/ಮುಇಂಗು/ಬಜೆಟ್/ಭೂಸ್ವಾಗು/2004–05/5120, ದಿಃ 21/02/2005.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆಯ ಮುಲ್ಲಾಮಾರಿ ಮೇಲ್ದಂಡೆ ಯೋಜನೆಗಾಗಿ ಗುಲ್ಬರ್ಗಾ ತಾಲ್ಲೂಕಿನ ಕಿಣ್ಣಿ ಸರ್ಪೋಸ್ ಮತ್ತು ಕಿಣ್ಣಿ ಸಡಕ್ ಗ್ರಾಮಗಳಲ್ಲಿ ಜಮೀನುಗಳು ಬಳಸಿಕೊಳ್ಳಲಾಗಿದ್ದು, ಸದರಿ ಜಮೀನುಗಳ ಭೂಸ್ವಾಧೀನ ಪ್ರಕರಣಗಳಲ್ಲಿ ಭೂಮಾಲೀಕರಿಗೆ ನೀಡಬೇಕಾದ ಹೆಚ್ಚುವರಿ ಪರಿಹಾರ ಕುರಿತು ಪ್ರಧಾನ ಸಿವಿಲ್ ನ್ಯಾಯಾಧೀಶರು (ಸೀನಿಯರ್ ವಿಭಾಗ) ಗುಲ್ಬರ್ಗಾ ಹಾಗೂ ಅಡಿಷನಲ್ ಸಿವಿಲ್ ನ್ಯಾಯಾಧೀಶರು ಗುಲ್ಬರ್ಗಾ ರವರು ನೀಡಿರುವ ತೀರ್ಪಿನಂತೆ ಪರಿಹಾರ ಧನಕ್ಕಾಗಿ ವಿಶೇಷ ಭೂಸ್ವಾಧೀನಾಧಿಕಾರಿಗಳು, ಸಣ್ಣ ಮತ್ತು ಮಧ್ಯಮ ನೀರಾವರಿ ಯೋಜನೆ ಗುಲ್ಬರ್ಗಾ ರವರು, ಈ ಕೆಳಗೆ ನಮೂದಿಸಿರುವ ಪತ್ರಗಳಲ್ಲಿ ಕೋರಿರುತ್ತಾರೆ ಎಂದು ತಿಳಿಸಿ, ಅವರು ಕೋರಿರುವಂತೆ ಹಣ ಭರವಸೆ ಹಾಗೂ ಅನುದಾನವನ್ನು ಬಿಡುಗಡೆ ಮಾಡುವಂತೆ ಮುಖ್ಯ ಇಂಜಿನಿಯರ್, ನೀರಾವರಿ ಯೋಜನಾ ವಲಯ, ಗುಲ್ಬರ್ಗಾರ ರವರು ಮೇಲೆ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ವಿಶೇಷ ಭೂಸ್ವಾಧೀನಾಧಿಕಾರಿಗಳು, ಸಣ್ಣ ಮತ್ತು ಮಧ್ಯಮ ನೀರಾವರಿ ಯೋಜನೆಗಳು, ಗುಲ್ಬರ್ಗಾ ರವರ ಪ್ರಸ್ತಾವನೆಯ ವಿವರಗಳು ಈ ಕೆಳಕಂಡಂತಿವೆ:

| ಕ್ರ. ಸಂ | ವಿಶೇಷ ಭೂಸ್ವಾಧೀನಾಧಿಕಾರಿಗಳು, ಸಣ್ಣ ಮತ್ತು ಮಧ್ಯಮ ನೀರಾವರಿ ಯೋಜನೆಗಳು, ಗುಲ್ಬರ್ಗಾ ರವರ ಪತ್ರಗಳಲ್ಲಿನ ಪ್ರಕರಣಗಳು | ಈ ಪ್ರಕರಣಗಳಿಗೆ ಬೇಕಿರುವ ಅನುದಾನ ಹಾಗೂ ಹಣ ಭರವಸೆಗಾಗಿ ವಿನಂತಿಸಿರುವ ಮೊತ್ತದ ವಿವರ |
|---|---|---|
| 1. | REV/LAQ/SPL/III/24/89-90/77 | ರೂ. 2,71,471.00 |
| 2. | REV/LAQ/SPL/III/18/89-90/78 | ರೂ. 3,54,916.00 |
| 3. | REV/LAQ/SPL/III/22/86-87/79 | ರೂ. 8,27,528.00 |
| 4. | REV/LAQ/SPL/III/18/89-90/80 | ರೂ. 97,019.00 |
| | **ಒಟ್ಟು** | **ರೂ. 15,50,934.00** |

ಮುಖ್ಯ ಇಂಜಿನಿಯರ್, ನೀರಾವರಿ ಯೋಜನಾ ವಲಯ, ಗುಲ್ಬರ್ಗಾ ಇವರ ಪ್ರಸ್ತಾವನೆಯನ್ನು ಸರ್ಕಾರವು ಪರಿಗಣಿಸಿ ಈಗಾಗಲೇ ಸದರಿ ಭೂಸ್ವಾಧೀನ ಜಮೀನುಗಳಿಗೆ ಪರಿಹಾರ ನೀಡಿದ್ದಲ್ಲಿ, ನೀಡಿದ ಮೊತ್ತವನ್ನು ಕಡಿತಗೊಳಿಸಿ ಉಳಿದ ಮೊತ್ತವನ್ನು ಸಂಬಂಧಪಟ್ಟವರಿಗೆ ನೀಡಲು ಹಾಗೂ ಈ ಪ್ರಕರಣದಲ್ಲಿ ಅನಾವಶ್ಯಕವಾಗಿ ವಿಳಂಬ ಮಾಡಿ ಹೆಚ್ಚಿನ ಬಡ್ಡಿಯನ್ನು ಪಾವತಿಸಲು ಕಾರಣರಾದವರ ಮೇಲೆ ಕ್ರಮ ಕೈಗೊಂಡು ಅವರಿಂದ ಹೆಚ್ಚುವರಿಯಾಗಿ ನೀಡಲಾದ ಬಡ್ಡಿಯನ್ನು ವಸೂಲಿ ಮಾಡಲು ನಿರ್ಧರಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 27 ಎಂಟಿಜೆಡ್ 2005, ಬೆಂಗಳೂರು, ದಿನಾಂಕ:30ನೇ ಜೂನ್, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಸರ್ಕಾರವು ಗುಲ್ಬರ್ಗಾ ಜಿಲ್ಲೆಯ ಮುಲ್ಲಾಮಾರಿ ಮೇಲ್ದಂಡೆ ನೀರಾವರಿ ಯೋಜನೆಗಾಗಿ ಗುಲ್ಬರ್ಗಾ ತಾಲ್ಲೂಕಿನ ಕಿಣ್ಣಿ ಸರ್ಪೋಸ್ ಮತ್ತು ಕಿಣ್ಣಿ ಸಡಕ್ ಗ್ರಾಮಗಳ ಜಮೀನುಗಳ ಭೂಸ್ವಾಧೀನ ಪ್ರಕರಣಗಳಲ್ಲಿ ನ್ಯಾಯಾಲಯದ ತೀರ್ಪಿನಂತೆ ಹೆಚ್ಚುವರಿ ಪರಿಹಾರ ಪಾವತಿಸಲು ಅನುದಾನ ಹಾಗೂ ಹಣ ಭರವಸೆ ಪತ್ರ ನೀಡಲು ಮುಖ್ಯ ಇಂಜಿನಿಯರ್, ನೀರಾವರಿ ಯೋಜನಾ ವಲಯ, ಗುಲ್ಬರ್ಗಾ ರವರು ಕೋರಿರುವಂತೆ ರೂ.15,50,934.00 ಗಳನ್ನು ಮಾತ್ರ (ಹದಿನೈದು ಲಕ್ಷದ ಐವತ್ತು ಸಾವಿರದ ಒಂಬೈನೂರ ಮೂವತ್ನಾಲ್ಕು ರೂ.ಗಳು ಮಾತ್ರ) ಭೂಸ್ವಾಧೀನ ಪರಿಹಾರ ಧನವನ್ನು ಕೂಡಲೇ ಮಂಜೂರು ಮಾಡಲು, ಅಲ್ಲದೆ ಸದರಿ ಜಮೀನುಗಳಿಗೆ ಈಗಾಗಲೇ ಭೂಪರಿಹಾರವನ್ನು ನೀಡಿದ್ದಲ್ಲಿ, ನೀಡಲಾದ ಮೊತ್ತದ ಹಣವನ್ನು ಮುರಿದುಕೊಂಡು ಉಳಿದ ಮೊತ್ತವನ್ನು ಈ ಕೆಳಗಿನ ಪ್ರಕರಣಗಳಲ್ಲಿ ಸಂಬಂಧಪಟ್ಟ ಭೂಮಾಲೀಕರಿಗೆ ನೀಡಲು ಆದೇಶಿಸಲಾಗಿದೆ.

| ಕ್ರ. ಸಂ | ವಿಶೇಷ ಭೂಸ್ವಾಧೀನಾಧಿಕಾರಿಗಳು, ಸಣ್ಣ ಮತ್ತು ಮಧ್ಯಮ ನೀರಾವರಿ ಯೋಜನೆಗಳು, ಗುಲ್ಬರ್ಗಾ ರವರ ಪತ್ರಗಳಲ್ಲಿನ ಪ್ರಕರಣಗಳು | ಈ ಪ್ರಕರಣಗಳಿಗೆ ಬೇಕಿರುವ ಅನುದಾನ ಹಾಗೂ ಹಣ ಭರವಸೆಗಾಗಿ ವಿನಂತಿಸಿರುವ ಮೊತ್ತದ ವಿವರ |
|---|---|---|
| 1. | REV/LAQ/SPL/III/24/89-90/77 | ರೂ. 2,71,471.00 |
| 2. | REV/LAQ/SPL/III/18/89-90/78 | ರೂ. 3,54,916.00 |
| 3. | REV/LAQ/SPL/III/22/86-87/79 | ರೂ. 8,27,528.00 |
| 4. | REV/LAQ/SPL/III/18/89-90/80 | ರೂ. 97,019.00 |
| | **ಒಟ್ಟು** | **ರೂ. 15,50,934.00** |

ಈ ಪ್ರಕರಣಗಳಲ್ಲಿ ಅಪರ ಸಿವಿಲ್ ನ್ಯಾಯಾಲಯ, ಗುಲ್ಬರ್ಗಾದ ತೀರ್ಪಿನಂತೆ ತ್ವರಿತ ಕ್ರಮ ಕೈಗೊಳ್ಳುವಲ್ಲಿ ವಿಳಂಬ ಮಾಡಿ ಪರಿಹಾರಕ್ಕೆ ಹೆಚ್ಚುವರಿ ಬಡ್ಡಿಯನ್ನು ನೀಡಲು ಕಾರಣರಾದ ಅಧಿಕಾರಿ/ ನೌಕರರುಗಳನ್ನು ಗುರುತಿಸಿ ಅವರುಗಳಿಂದ ಸದರಿ ಹಣವನ್ನು ವಸೂಲಿ ಮಾಡಲು ಸಹ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆಃ ಲೋಇ 382 ಆಕೋ-1 2005, ದಿಃ07/06/2005ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಐ.ಡಿ. ಧಮನ್**
ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ),
ಜಲ ಸಂಪನ್ಮೂಲ ಇಲಾಖೆ (ಕೃಭಾಜನಿನಿ ವಿ. ಕೋಶ).

ಪಿ.ಆರ್.978

## ಇಂಧನ ಸಚಿವಾಲಯ

**ವಿಷಯ:** ಅನಧಿಕೃತ ಪಂಪ್‌ಸೆಟ್‌ಗಳ ಸಕ್ರಮೀಕರಣ ಕಾಲಾವಕಾಶವನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 144 ಪಿಎಸ್‌ಆರ್ 2004, ದಿನಾಂಕ: 15.03.2005.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 144 ಪಿಎಸ್‌ಆರ್ 2004, ದಿನಾಂಕ: 02.05.2005.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 144 ಪಿಎಸ್‌ಆರ್ 2004, ದಿನಾಂಕ: 23.05.2005.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ (1)ರ ಆದೇಶದಲ್ಲಿ ರಾಜ್ಯದಲ್ಲಿರುವ ಅನಧಿಕೃತ ಪಂಪ್‌ಸೆಟ್‌ಗಳನ್ನು ಸಕ್ರಮಗೊಳಿಸುವ ಕಾಲಮಿತಿಯನ್ನು ದಿನಾಂಕ: 30.04.2005ರವರೆಗೆ ನಿಗದಿಪಡಿಸಲಾಗಿತ್ತು.

ಓದಲಾದ (2)ರ ಆದೇಶದಲ್ಲಿ ಹಲವು ಅಂಶಗಳನ್ನು ಗಣನೆಗೆ ತೆಗೆದುಕೊಂಡು ಅನಧಿಕೃತ ಪಂಪ್‌ಸೆಟ್‌ಗಳ ಸಕ್ರಮೀಕರಣಗೊಳಿಸಲು ನೀಡಲಾದ ದಿನಾಂಕ: 30.04.2005ರ ಗಡುವನ್ನು ದಿನಾಂಕ: 25.05.2005ರವರೆಗೆ ವಿಸ್ತರಿಸಲಾಗಿತ್ತು.

ಓದಲಾದ (3)ರ ಆದೇಶದಲ್ಲಿ ಹಲವು ಅಂಶಗಳನ್ನು ಗಣನೆಗೆ ತೆಗೆದುಕೊಂಡು ಅನಧಿಕೃತ ಪಂಪ್‌ಸೆಟ್‌ಗಳ ಸಕ್ರಮೀಕರಣಗೊಳಿಸಲು ನೀಡಲಾದ ದಿನಾಂಕ: 25.05.2005ರ ಗಡುವನ್ನು ದಿನಾಂಕ: 30.06.2005ರವರೆಗೆ ವಿಸ್ತರಿಸಲಾಗಿತ್ತು. ಈ ಸೌಲಭ್ಯದ ಬಗ್ಗೆ ಮಾನ್ಯ ಲೋಕೋಪಯೋಗಿ ಮತ್ತು ಇಂಧನ ಸಚಿವರು ವಿಧಾನ ಪರಿಷತ್ತಿನಲ್ಲಿ ಹೇಳಿಕೆ ನೀಡಿರುವಂತೆ ಸರ್ಕಾರವು ಸದರಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 144 ಪಿಎಸ್‌ಆರ್ 2004(ಪಿ), ಬೆಂಗಳೂರು, ದಿನಾಂಕ: 7ನೇ ಜುಲೈ, 2005**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜ್ಯದಲ್ಲಿರುವ ಅನಧಿಕೃತ ಪಂಪ್‌ಸೆಟ್‌ಗಳ ಸಕ್ರಮೀಕರಣದ ಕಾಲಾವಕಾಶವನ್ನು ದಿನಾಂಕ: 01.07.2005 ರಿಂದ 31.08.2005ರವರೆಗೆ ವಿಸ್ತರಿಸಲಾಗಿದೆ. ಹೀಗೆ ವಿಸ್ತರಿಸಲಾದ ಕಾಲಾವಕಾಶವನ್ನು ಯಾವುದೇ ಕಾರಣಕ್ಕೂ ಪುನಃ ವಿಸ್ತರಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್.1022

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಮಹಮದ್ ಹುಸೇನ್ ಹಾಲಿ ಪಿ.ಐ.ವಿಧಾನ ಸೌಧ, ಭದ್ರತೆ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಪೂರ್ವ ವಿಭಾಗ, ಬೆಂಗಳೂರು ಇವರ ಆದೇಶ ಸಂಖ್ಯೆ:ಡಿಇ/ಆರ್-6/120/93, ದಿನಾಂಕ:05-02-1997.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ ಮತ್ತು ಸಿಎಆರ್ ಬೆಂಗಳೂರು, ಇವರ ಆದೇಶ ಸಂಖ್ಯೆ:8/ಅಪೀಲು/97-98. ದಿನಾಂಕ:04-06-1997.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:18-06-2002.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ 8/21/2002-03, ದಿನಾಂಕ:29-07-2003. ಮತ್ತು 04-04-2005.

**ಪ್ರಸ್ತಾವನೆ:**

ಶ್ರೀ ಮಹಮದ್ ಹುಸೇನ್ ಹಾಲಿ ಪಿಐ, ವಿಧಾನ ಸೌಧ, ಭದ್ರತೆ, ಬೆಂಗಳೂರು, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:** "1. ದಿನಾಂಕ:06-01-1994 ರಂದು ನೀವು ಅಂದರೆ ಶ್ರೀ ಮಹಮದ್ ಹುಸೇನ್, ಪಿ.ಎಸ್.ಐ, ಕಮರ್ಷಿಯಲ್ ಸ್ಟ್ರೀಟ್ ಠಾಣೆಯಲ್ಲಿ ಠಾಣಾಧಿಕಾರಿಯಾಗಿ ರಾತ್ರಿ ಸುಮಾರು 9-00 ವೇಳೆಯಲ್ಲಿ ಶ್ರೀ ಎ.ಕೆ.ನಾರಾಯಣ ಕೊಟ್ಟ ಫಿರ್ಯಾದಿನ ಮೇಲೆ ಶ್ರೀ ಸುಂದರರಾಜ್ ಆಚಾರಿ ಎಂಬ ವ್ಯಕ್ತಿಯನ್ನು ಠಾಣೆಗೆ ಕರೆಯಿಸಿ ಅವರನ್ನು ಅಕ್ರಮ ಬಂಧನದಲ್ಲಿಟ್ಟು ಅವರ ಸಾವಿಗೆ ಕಾರಣರಾಗಿರುತ್ತೀರಿ.

2. ದಿನಾಂಕ:06-01-1994 ರಂದು ನೀವು ಅಂದರೆ ಮಹಮದ್ ಹುಸೇನ್, ಪಿ.ಎಸ್.ಐ, ಕಮರ್ಷಿಯಲ್ ಸ್ಟ್ರೀಟ್ ಠಾಣೆಯಲ್ಲಿ ಕೆಲಸ ಮಾಡುತ್ತಿದ್ದಾಗ ನೀವು ಶ್ರೀ ಸುಂದರ ರಾಜ್ ಆಚಾರಿ ಎಂಬ ವ್ಯಕ್ತಿ ಠಾಣೆಯಲ್ಲಿ ಮೃತಪಟ್ಟಿದ್ದು, ಅವರನ್ನು ರಾತ್ರಿ 10-00 ಗಂಟೆಗೆ ವೈದ್ಯರ ತಪಾಸಣೆಗೆ ಬೌರಿಂಗ್ ಆಸ್ಪತ್ರೆಗೆ ಕಳುಹಿಸಿದ್ದಾಗ, ಠಾಣಾ ದಿನಚರಿಯಲ್ಲಿ ನಮೂದಿಸಿರುತ್ತೀರಿ, ಆದರೆ ನೀವು ಅವರನ್ನು ಆಸ್ಪತ್ರೆಗೆ ಕಳುಹಿಸಿದ ಬಗ್ಗೆ ದಾಖಲೆಗಳನ್ನು ಆಸ್ಪತ್ರೆಗೆ ಕಳುಹಿಸಿರುವುದಿಲ್ಲ. ಆದ್ದರಿಂದ ತಪ್ಪು ಮಾಹಿತಿಯನ್ನು ಕೊಟ್ಟು ಕರ್ತವ್ಯ ಲೋಪ ಮಾಡಿರುತ್ತೀರಿ.

3. ನೀವು ಅಂದರೆ ಶ್ರೀ ಮಹಮದ್ ಹುಸೇನ್, ಪಿ.ಎಸ್.ಐರವರು ದಿನಾಂಕ:06-01-1994 ರಂದು ಮೃತ ಸುಂದರರಾಜ ಆಚಾರಿಯವರನ್ನು ಠಾಣೆಗೆ ಕರೆಯಿಸಿದ ಮೇಲೆ ಅವರ ಅಂಗಶೋಧನೆ ಮಾಡಿ ಅವರಲ್ಲಿದ್ದ ವಸ್ತುಗಳನ್ನು ಅಮಾನತ್ತು ಪಡಿಸದೆ ಕರ್ತವ್ಯ ಲೋಪ ಮಾಡಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಪೂರ್ವ ವಿಭಾಗ ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:05-02-1997ರ ಆದೇಶದಲ್ಲಿ ಅರ್ಜಿದಾರರಿಗೆ `ಸೆನ್ಸೂರ್` (ಛೀಮಾರಿ) ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ ಮತ್ತು ಸಿಎಆರ್, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 04-06-1997 ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಈ ಪ್ರಕರಣದಲ್ಲಿ CENSURE ದಂಡನೆಯನ್ನು ವಿಧಿಸಲಾಗಿದೆ. ಅರ್ಜಿದಾರರು ತಮ್ಮ ಆರೋಪದಿಂದ ಸಂಪೂರ್ಣವಾಗಿ ಆರೋಪ ಮುಕ್ತರಾಗಿರುವುದಿಲ್ಲ. ತಮ್ಮ ದೋಷರೋಪದಿಂದ ಸಂಪೂರ್ಣವಾಗಿ ದೋಷಮುಕ್ತರಾಗಿದಲ್ಲಿ, ನಿಯಮಗಳನ್ವಯ ಇವರ ಅಮಾನತ್ತಿನ ಅವಧಿಯನ್ನು `ಕರ್ತವ್ಯದ ಮೇಲೆ` ಎಂದು ಪರಿಗಣಿಸಬಹುದಾಗಿರುತ್ತದೆ. ಆದರೆ ಅರ್ಜಿದಾರರ ಮೇಲಿನ ಆರೋಪ ಸಾಬೀತಾಗಿದ್ದ ಹಿನ್ನೆಲೆಯಲ್ಲಿ Censure ದಂಡನೆ ವಿಧಿಸಲಾಗಿದ್ದು, KCSR ನಿಯಮ 99 ರನ್ವಯ ದೋಷಮುಕ್ತಗೊಳಿಸಿಲ್ಲದ ಕಾರಣ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಬೇಕಾಗಿರುತ್ತದೆ. ದಿನಾಂಕ:07-01-1994 ರಿಂದ ದಿನಾಂಕ:28-06-1994ರ ವರೆಗೆ ಕರ್ತವ್ಯಕ್ಕೆ ಹಾಜರಾಗದಿರುವ ಅವಧಿಯನ್ನು Censure ದಂಡನೆ ವಿಧಿಸಿರುವ ಹಿನ್ನೆಲೆಯಲ್ಲಿ ಅಮಾನತ್ತೆಂದೇ ಪರಿಗಣಿಸಬೇಕಾಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ನಿರ್ಲಕ್ಷತೆ, ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 138 ಪೊಸಿಅ 2002, ಬೆಂಗಳೂರು, ದಿನಾಂಕ: 5ನೇ ಜುಲೈ, 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ,ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಗಳು, 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಮಹಮದ್ ಹುಸೇನ್ ಹಾಲಿ ಪಿಐ ವಿಧಾನ ಸೌಧ, ಭದ್ರತೆ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ. ಗುಂಡೂರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

ಪಿ.ಆರ್.1014

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಗುಲ್ಬರ್ಗಾ ಜಿಲ್ಲೆ ಚಿಂಚೋಳಿ ತಾಲ್ಲೂಕು ಕೋಡ್ಲಿ ಅಲ್ಲಾಪುರ ಗ್ರಾಮದ ಬಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಭೂಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ, ಉತ್ತರವಲಯ, ಬಿಜಾಪುರ ಇವರ ದಿನಾಂಕ:18.02.2005ರ ಪತ್ರ ಸಂ:ಮುಇಂ/ಸನೀ(ಉ)ವ/ಬಿಜೆಪಿ/ಭೂಸ್ವಾ/ಕೋಡ್ಲಿ ಅಲ್ಲಾಪುರ/ಇಪಿ/2004–05.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:18.02.2005ರ ಪತ್ರದಲ್ಲಿ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಗುಲ್ಬರ್ಗಾ ಜಿಲ್ಲೆ ಚಿಂಚೋಳಿ ತಾಲ್ಲೂಕು ಕೋಡ್ಲಿ ಅಲ್ಲಾಪುರ ಗ್ರಾಮದ ಬಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಗುಲ್ಬರ್ಗಾದ ಮಾನ್ಯ 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಲಯದ(ಹಿರಿಯ ಶ್ರೇಣಿ) ಆದೇಶಾನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.46,89,975.00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಈ ಪ್ರಕರಣದ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ:04.04.1995.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 6(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ:26.09.1996.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಅವಾರ್ಡ್ ಘೋಷಿಸಿದ ದಿನಾಂಕ:25.06.1997.

ಐತೀರ್ಪಿನಂತೆ ಪರಿಹಾರಧನ ಪಡೆದ ಭೂಮಾಲೀಕರು ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ 18(1)ರನ್ವಯ ಗುಲ್ಬರ್ಗಾದ 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ) ದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿ ಮಾನ್ಯ ನ್ಯಾಯಾಲಯದಿಂದ ಹೆಚ್ಚಿನ ಪರಿಹಾರಕ್ಕೆ ಆದೇಶ ಪಡೆದುಕೊಂಡಿದ್ದಾರೆ.

| ಕ್ರ. ಸಂ. | ಎಲ್.ಎ.ಸಿ ಪ್ರಕರಣ ಸಂ. | ನ್ಯಾಯಾಲಯದ ಆದೇಶದ ದಿನಾಂಕ | ಇ.ಪಿ.ಸಂ. ಮತ್ತು ದಿನಾಂಕ | ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ(ಬಡ್ಡಿ ಎಲ್ಲಾ ಅಂಶಗಳು ಸೇರಿ ಲೆಕ್ಕಾಚಾರ ತ:ಖ್ತೆಯಂತೆ) |
|---|---|---|---|---|---|---|
| 1 | 431/98 | 05.08.2002 | 61/03 | 37 | 9–00 | 521120 |
| 2 | 432/98 | 05.08.2002 | 62/03 | 34–33 | 29–25 | 1986455 |
| 3 | 435/98 | 05.08.2002 | 64/03 | 42 | 11–32 | 683185 |
| 4 | 438/98 | 05.08.2002 | 59/03 | 35 | 3–07 | 183964 |
| 5 | 439/98 | 05.08.2002 | 63/03 | 29 | 1–26 | 95700 |
| 6 | 440/98 | 06.08.2002 | 60/03 | 34/ಬಿ | 3–22 | 205672 |
| 7 | 441/98 | 06.08.2002 | 58/03 | 28/ಎ:ಬಿ:ಸಿ | 3–10 | 126075 |
| 8 | 442/98 | 06.08.2002 | 57/03 | 27 | 2–10 | 130427 |
| 9 | 444/98 | 06.08.2002 | 66/03 | 32/ಎ | 3–35 | 224481 |
| 10 | 446/98 | 06.08.2002 | 65/03 | 48 | 5–34 | 324328 |
| 11 | 447/98 | 06.08.2002 | 68/03 | 36/ಎ | 3–31 | 208568 |
| | | | | | ಒಟ್ಟು | 4689975 |

ಮೇಲ್ಕಂಡ ಎಲ್.ಎ.ಸಿ. ಆದೇಶಗಳ ಬಗ್ಗೆ ಕಾನೂನು ಇಲಾಖೆ ತಮ್ಮ ಪತ್ರ ಸಂ:ಲಾ/622ಎಲ್ಎಸ್‌ಜಿ 2002 ದಿ:04.10.2002 ಮತ್ತು ಸಂ:ಲಾ/624ಎಲ್ಎಸ್‌ಜಿ 2002 ದಿನಾಂಕ:04.10.2002ರಂತೆ ಈ ಆರ್ದೇಶಗಳ **ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ತೀರ್ಮಾನಿಸಿದೆ.**

ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂ:ಸನೀಇ 09 ಭೂಸ್ವಾಪ್ರ 2003, ಬೆಂಗಳೂರು, ದಿನಾಂಕ: 5ನೇ ಜುಲೈ, 2005**

ಗುಲ್ಬರ್ಗಾ ಜಿಲ್ಲೆ ಚಿಂಚೋಳಿ ತಾಲ್ಲೂಕು ಕೋಡ್ಲಿ ಅಲ್ಲಾಪುರ ಗ್ರಾಮದ ಬಳಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಗುಲ್ಬರ್ಗಾದ 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಲಯ(ಹಿರಿಯ ಶ್ರೇಣಿ)ದ ಆದೇಶದನ್ವಯ ಪರಿಹಾರಧನ ರೂ.46,89,975.00(ನಲವತ್ತಾರು ಲಕ್ಷದ ಎಂಭತ್ತೊಂಭತ್ತು ಸಾವಿರದ ಒಂಭೈನೂರ ಎಪ್ಪತ್ತೈದು ರೂಪಾಯಿಗಳು ಮಾತ್ರ)ಗಳನ್ನು ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಪ್ರಕರಣವಾರು ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಪಾವತಿಸುವ ಮುನ್ನ ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಸರ್ಕಾರಕ್ಕೆ ಅಧಿಕ ಆರ್ಥಿಕ ವೆಚ್ಚವಾಗದಂತೆ ಪಾವತಿಸುವುದು.

ಈ ವೆಚ್ಚವನ್ನು 2005–06ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ:ಎಫ್‌ಡಿ 1 ಟಿಎಫ್‌ಪಿ 2003 ದಿನಾಂಕ:12.06.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎನ್.ಮಂಜುನಾಥ**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

ಪಿ.ಆರ್.1018

**ವಿಷಯ:** ಬಿಜಾಪುರ ಜಿಲ್ಲೆ ಸಿಂಧಗಿ ತಾಲ್ಲೂಕು ಇಂಗಳಗಿ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಭೂಸ್ವಾಧೀನ ಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ, ಉತ್ತರವಲಯ, ಬಿಜಾಪುರ ಇವರ ದಿನಾಂಕ:15.02.2005ರ ಪತ್ರ ಸಂ:ಮುಇಂ/ಸನೀ(ಉ)/ಬಿಜೆಪಿ/ಭೂಸ್ವಾಪ್ರ/04–05/885.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:15.02.2005ರ ಪತ್ರದಲ್ಲಿ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಬಿಜಾಪುರ ಜಿಲ್ಲೆ ಸಿಂಧಗಿ ತಾಲ್ಲೂಕು ಇಂಗಳಗಿ ಗ್ರಾಮದ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಬಿಜಾಪುರದ 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಲಯದ(ಹಿರಿಯ ಶ್ರೇಣಿ) ಆದೇಶಾನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ.21,75,227.00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಈ ಪ್ರಕರಣದ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ:11.05.1995.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 6(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ:20.06.1996.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಅವಾರ್ಡ್ ಘೋಷಿಸಿದ ದಿನಾಂಕ:06.09.1997.
- ಜಮೀನಿನ ಕಬ್ಜ ಪಡೆದ ದಿನಾಂಕ:03.10.1997.

ಐತೀರ್ಪಿನಂತೆ ಪರಿಹಾರಧನ ಪಡೆದ ಭೂಮಾಲೀಕರು ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರನ್ವಯ ಬಿಜಾಪುರದ 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ) ದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿ ಮಾನ್ಯ ನ್ಯಾಯಾಲಯದಿಂದ ಹೆಚ್ಚಿನ ಪರಿಹಾರಕ್ಕೆ ಆದೇಶ ಪಡೆದುಕೊಂಡಿದ್ದಾರೆ. ಈ ಆದೇಶದ ವಿರುದ್ಧ ಸರ್ಕಾರದ ಪರವಾಗಿ ಉಚ್ಛನ್ಯಾಯಾಲಯದಲ್ಲಿ ಮೇಲ್ಮನವಿಗಳನ್ನು (ಎಂ.ಎಫ್.ಎ) ಸಲ್ಲಿಸಿದ್ದು, ಮಾನ್ಯ ಉಚ್ಛ ನ್ಯಾಯಾಲಯದಿಂದ ಮೇಲ್ಮನವಿಗಳು ವಜಾಗೊಂಡಿವೆ. ಈ ತೀರ್ಪಿನ ವಿರುದ್ಧ ಪುನ: ಮೇಲ್ಮನವಿ ಸಲ್ಲಿಸದಿರಲು ತೀರ್ಮಾನಿಸಿ ಕೆಳಕಂಡ ಪ್ರಕರಣಗಳಿಗೆ ಸಿವಿಲ್ ನ್ಯಾಯಾಲಯದ ಆದೇಶಾನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ನಿರ್ಧರಿಸಿ ಸರ್ಕಾರವು ಆದೇಶ ಹೊರಡಿಸಿದೆ.

| ಕ್ರ. ಸಂ | ಎಲ್.ಎ.ಸಿ ಪ್ರಕರಣ ಸಂ. | ನ್ಯಾಯಾಲಯದ ಆದೇಶದ ದಿನಾಂಕ | ಎಂ.ಎಫ್.ಎ. ಸಂಖ್ಯೆ | ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ(ಬಡ್ಡಿ ಎಲ್ಲಾ ಅಂಶಗಳು ಸೇರಿ ಲೆಕ್ಕಾಚಾರ ತ:ಖ್ತೆಯಂತೆ) |
|---|---|---|---|---|---|---|
| 1 | 691/97 | 13.01.2003 | 3105/03 | 548/1ಎ | 2–00 | 105238 |
| 2 | 692/97 | 13.01.2003 | 3057/03 | 572/3 | 1–32 | 134179 |
| 3 | 693/97 | 13.01.2003 | 3055/03 | 548/1ಬಿ | 2–39<br>0–22 | 228078 |
| 4 | 695/97 | 13.01.2003 | 3106/03 | 566/2 | 2–28 | 142186 |
| 5 | 696/97 | 13.01.2003 | 3107/03 | 568/1 | 5–09 | 272895 |
| 6 | 697/97 | 13.01.2003 | 3102/03 | 569 | 8–22 | 449792 |
| 7 | 698/97 | 13.01.2003 | 3060/03 | 575/2ಬಿ | 1–39 | 151549 |
| 8 | 699/97 | 13.01.2003 | 3052/03 | 570 | 6–33 | 523184 |
| 9 | 700/97 | 13.01.2003 | 3049/03 | 571/3 | 1–18 | 92157 |
| | | | | | ಒಟ್ಟು | 2099258 |

ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂ:ಸನೀಇ 12 ಭೂಸ್ವಾಪ್ರ 2005, ಬೆಂಗಳೂರು, ದಿನಾಂಕ: 5ನೇ ಜುಲೈ, 2005**

ಬಿಜಾಪುರ ಜಿಲ್ಲೆ ಸಿಂಧಗಿ ತಾಲ್ಲೂಕು ಇಂಗಳಗಿ ಗ್ರಾಮದ ಸಣ್ಣ ನೀರಾವರಿ ಕೆರೆಯ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಬಿಜಾಪುರದ 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಲಯದ(ಹಿರಿಯ ಶ್ರೇಣಿ) ಆದೇಶಾನುಸಾರ ಹೆಚ್ಚಿನ ಪರಿಹಾರಧನ ರೂ.20,99,258.00 (ಇಪ್ಪತ್ತು ಲಕ್ಷದ ತೊಂಭತ್ತೊಂಭತ್ತು ಸಾವಿರದ ಇನ್ನೂರ ಐವತ್ತೆಂಟು ರೂಪಾಯಿಗಳು ಮಾತ್ರ) ಗಳನ್ನು ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಪಾವತಿಸುವ ಮುನ್ನ ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಸರ್ಕಾರಕ್ಕೆ ಅಧಿಕ ಆರ್ಥಿಕ ವೆಚ್ಚವಾಗದಂತೆ ಪಾವತಿಸುವುದು.

ಈ ವೆಚ್ಚವನ್ನು 2005-06ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702-00-800-1-00-ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು-ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ:ಎಫ್‌ಡಿ 1 ಟಿಎಫ್‌ಪಿ 2003 ದಿನಾಂಕ:12.06.2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎನ್.ಮಂಜುನಾಥ**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

ಪಿ.ಆರ್.1019

**ವಿಷಯ:** ಗುಲ್ಬರ್ಗಾ ಜಿಲ್ಲೆ, ಆಳಂದ ತಾಲ್ಲೂಕಿನ ಕೆರೂರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶಾನುಸಾರ ಹಾಗೂ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಘೋಷಿಸಲಾದ ಐತೀರ್ಪಿನಂತೆ ಹೆಚ್ಚಿನ ಪರಿಹಾರ ಧನ ಪಾವತಿಸುವ ಕುರಿತು.

**ಓದಲಾಗಿದೆ:** ಸಣ್ಣ ನೀರಾವರಿ ಗುಲ್ಬರ್ಗಾ ವಿಭಾಗದ ಕಾರ್ಯಪಾಲಕ ಇಂಜಿನಿಯರ್‌ರವರ ಪತ್ರ ಸಂಖ್ಯೆ:ಸನೀವಿಗು/ಭೂಸ್ವಾ/2005-06.

**ಪ್ರಸ್ತಾವನೆ:**

ಮೇಲೆ ಓದಲಾದ ಸಣ್ಣ ನೀರಾವರಿ ಗುಲ್ಬರ್ಗಾ ವಿಭಾಗದ ಕಾರ್ಯಪಾಲಕ ಇಂಜಿನಿಯರ್ ರವರ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆ, ಆಳಂದ ತಾಲ್ಲೂಕಿನ ಕೆರೂರ ಸಣ್ಣ ನೀರಾವರಿ ಕೆರೆಗಾಗಿ ಸ್ವಾಧೀನ ಪಡಿಸಿಕೊಂಡ ಜಮೀನುಗಳಿಗೆ ಹೆಚ್ಚಿನ ಪರಿಹಾರ ಧನ ಪಾವತಿಸಲು ರೂ.4,91,733-00ಗಳನ್ನು ಬಿಡುಗಡೆ ಮಾಡುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಕಳುಹಿಸಿದ್ದಾರೆ.

ಆಳಂದ ತಾಲ್ಲೂಕಿನ ಕೆರೂರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಅಗತ್ಯವಿದ್ದ ಕೆರೂರು ಗ್ರಾಮದ ಸರ್ವೆ ನಂಬರ್‌ಗಳ ಜಮೀನುಗಳನ್ನು ಸ್ವಾಧೀನ ಪಡಿಸಿಕೊಳ್ಳಲು ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅಧಿಸೂಚನೆಯನ್ನು ದಿನಾಂಕ 01/01/1982ರಂದು ಮತ್ತು 6(1)ರ ಅಧಿಸೂಚನೆಯನ್ನು ದಿನಾಂಕ: 15/07/1982 ರಂದು ಹೊರಡಿಸಿ ಭೂಸ್ವಾಧೀನಾಧಿಕಾರಿಗಳು ಭೂಪರಿಹಾರದ ಐತೀರ್ಪನ್ನು ದಿನಾಂಕ 13/06/2003ರಂದು ಘೋಷಿಸಿದ್ದಾರೆ. ಕಾಮಗಾರಿಗಾಗಿ ಭೂಮಿಯನ್ನು ದಿನಾಂಕ 16/09/1986ರಲ್ಲಿ ಕಬ್ಜೆ ಪಡೆಯಲಾಗಿದೆ. ಭೂಸ್ವಾಧೀನಕ್ಕೊಳಪಟ್ಟ ಕೆರೂರ ಗ್ರಾಮದ ಸ.ನಂ.9/2/1ರ 1-14 ಎಕರೆ ಮತ್ತು ಸ.ನಂ.83/2ರ 0-34 ಎಕರೆ ಜಮೀನಿನ ಮಾಲೀಕರು ಹೆಚ್ಚಿನ ಪರಿಹಾರಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರನ್ವಯ ಗುಲ್ಬರ್ಗಾದ ಪ್ರಿನ್ಸಿಪಲ್ ಸಿವಿಲ್ ಜಡ್ಜ್ (ಹಿರಿಯ ಶ್ರೇಣಿ) ರವರ ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣ ದಾಖಲಿಸಿದ್ದು, ನ್ಯಾಯಾಲಯವು ಈ ಪ್ರಕರಣಗಳನ್ನು ಎಲ್.ಎ.ಸಿ. 689/95 ಮತ್ತು 688/95ರ ಜಂಟಿಯಾಗಿ ವಿಚಾರಣೆ ನಡೆಸಿ ಹೆಚ್ಚಿನ ಪರಿಹಾರ ಧನ ನೀಡಲು ಎರಡೂ ಪ್ರಕರಣಗಳಿಗೂ ಸೇರಿ ಸಾಮಾನ್ಯ ತೀರ್ಪನ್ನು ದಿನಾಂಕ 09/07/1998ರಂದು ನೀಡಿದೆ. ಈ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರದಲು ಸರ್ಕಾರವು ನಿರ್ಧರಿಸಿರುವುದರಿಂದ ಈ ಪ್ರಕರಣದಲ್ಲಿ ಹೆಚ್ಚಿನ ಪರಿಹಾರ ಧನ ನೀಡಬೇಕಾಗಿದೆ. ಸಿವಿಲ್ ನ್ಯಾಯಾಲಯದ ತೀರ್ಪನ್ನು ಉಲ್ಲೇಖಿಸಿ ಈ ಭೂಸ್ವಾಧೀನ ಪ್ರಕರಣದ 4(1)ರ ಅಧಿಸೂಚನೆಯಲ್ಲಿ ಸೇರಿದ್ದ ಕೆರೂರ ಗ್ರಾಮದ ಇತರೆ ಸ.ನಂ.8/2ಬಿ (1-04 ಎಕರೆ), 82/1-2(10-29 ಎಕರೆ) ಮತ್ತು 82/2(2-32)ರ ಭೂಮಾಲೀಕರು ಹೆಚ್ಚಿನ ಪರಿಹಾರಕ್ಕಾಗಿ ವಿಶೇಷ ಭೂಸ್ವಾಧೀನಾಧಿಕಾರಿಗಳು, ಮಧ್ಯಮ ಮತ್ತು ಸಣ್ಣ ನೀರಾವರಿ ಯೋಜನೆಗಳು, ಗುಲ್ಬರ್ಗಾ ಇವರಿಗೆ ಮನವಿ ಸಲ್ಲಿಸಿದ್ದು, ಭೂಸ್ವಾಧೀನಾಧಿಕರಿಗಳು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಸದರಿ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ನೀಡಿರುವ ಪರಿಹಾರ ಧನದಂತೆ ಹೆಚ್ಚಿನ ಪರಿಹಾರ ಧನ ನೀಡಲು ದಿನಾಂಕ 11/12/1998ರಲ್ಲಿ ಆದೇಶ ಹೊರಡಿಸಿದ್ದಾರೆ. ಈ ಆದೇಶದಂತೆ ಪಾವತಿಸಬೇಕಾದ ಪರಿಹಾರ ಮೊತ್ತ ಸರ್ವೆ ನಂಬರ್‌ವಾರು ವಿವರ ಕೆಳಕಂಡಂತಿದೆ:

**ಆಳಂದ ತಾಲ್ಲೂಕಿನ ಕೆರೂರ ಗ್ರಾಮಕ್ಕೆ ಸೇರಿದ ಸ.ನಂ. ಗಳು.**

| ಕ್ರ.ಸಂ. | ಎಲ್.ಎ.ಸಿ. | ಸರ್ವೆ ನಂಬರ್ | ವಿಸ್ತೀರ್ಣ | ಪರಿಹಾರ ಧನದ ಮೊತ್ತ |
|---|---|---|---|---|
| 1 | 688/95 | 9/2/1 | 1-14 | 39595 |
| 2 | 689/95 | 83/2 | 0-34 | 24956 |
| 3 | 689/95ರನ್ವಯ 28(ಎ) ರಂತೆ | 82/1-2 | 10-29 | 313268 |
| 4 | 689/95ರನ್ವಯ 28(ಎ) ರಂತೆ | 8/2ಬಿ | 1-04 | 32129 |
| 5 | 689/95ರನ್ವಯ 28(ಎ) ರಂತೆ | 82/2 | 2-32 | 81785 |
| | | | **ಒಟ್ಟು** | **491733** |

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸನೀಇ 21 ಭೂಸ್ವಾಪ್ರ 2005,ಬೆಂಗಳೂರು,ದಿನಾಂಕ: 27ನೇ ಜೂನ್ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಆಳಂದ ತಾಲ್ಲೂಕಿನ ಕೆರೂರ ಗ್ರಾಮದ ಸಣ್ಣ ನೀರವರಿ ಕೆರೆಗಾಗಿ ಸ್ವಾಧೀನಪಡಿಸಿಕೊಂಡ ಪ್ರಸ್ತಾವನೆಯಲ್ಲಿ ತಿಳಿಸಿರುವ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಎಲ್.ಎ.ಸಿ. ಪ್ರಕರಣ ಸಂಖ್ಯೆ:688/95, 689/95ರ ತೀರ್ಪಿನ ಅನುಸಾರ ಹಾಗೂ ಈ ಪ್ರಕರಣಗಳನ್ನು ಉಲ್ಲೇಖಿಸಿ ಭೂಸ್ವಾಧೀನಾಧಿಕಾರಿಗಳು ಭೂಸ್ವಾಧೀನ ಕಾಯ್ದೆ ಕಲಂ 28(ಎ)ರನ್ವಯ ನೀಡಿದ ಆದೇಶದಂತೆ ರೂ.4,91,733-00ಗಳ (ನಾಲ್ಕು ಲಕ್ಷದ ತೊಂಭತ್ತೊಂದು ಸಾವಿರದ ಏಳು ನೂರ ಮೂವತ್ತ್ಮೂರು ರೂ.ಗಳು ಮಾತ್ರ) ಹೆಚ್ಚಿನ ಪರಿಹಾರ ಧನವನ್ನು ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ.

ಈ ವೆಚ್ಚವನ್ನು 2005-06ನೇ ಸಾಲಿನ ಆಯವಯ್ಯದಲ್ಲಿ ಲೆಕ್ಕ ಶೀರ್ಷಿಕೆ "4702-00-800-1-00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಮುಗಳ ಇತ್ಯರ್ಥ-132 ಬಂಡವಾಳ ವೆಚ್ಚಗಳು" ಅಡಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2003, ದಿನಾಂಕ 12/06/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎನ್.ಮಂಜುನಾಥ**
ಸರ್ಕಾರದ ಅಧೀನ ಕಾರ್ಯದರ್ಶಿ
ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

ಪಿ.ಆರ್.1004